# ಶೂದ್ರ

ಬೆಲೆ : 2-50 ರೂ.



ಈ ಸಂಚಿಕೆಯಲ್ಲಿ :

ಎಸ್. ಎಸ್. ಹಿರೇಮಠ್— ಬಿದಿರಹಳ್ಳಿ ನರಸಿಂಹಮೂರ್ತಿ — ಬರಗೂರು ರಾಮಚಂದ್ರಪ್ಪ — ಓ. ಎಲ್. ನಾಗಭೂಷಣಸ್ವಾಮಿ — ಎಸ್. ಮಾಲತಿ ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯ — ಸಿದ್ಧರಾಮಯ್ಯ — ಕೆ. ಸಿ. ಮಮತ ಸುಚೇತನ ಸ್ವರೂಪ — ಬಿ. ಎಸ್. ಗಾಯಿತ್ರಿ — ಎ. ಜಿ. ವಿಶ್ವಮೂರ್ತಿ ಕನಸಿಗೊಂದು ಕಣ್ಣು —ಯಶವಂತ ಚಿತ್ತಾಲರ ಒಂದು ಪತ್ರ.

'ಮುಕ್ತ' ಚರ್ಚೆಗಾಗಿ 'ಶೂದ್ರ' ತಿಂಗಳ ಪತ್ರಿಕೆ

ಸಂಚಿಕೆ : 11 ಸೆಪ್ಟೆಂಬರ್ 1986 ಸಂಪುಟ : 12

ಸಹಾಯಕ ಸಂಪಾದಕರು : ನಿರ್ಮಲಾರೆಡ್ಡಿ—ಆನಂದ ಮೂರ್ತಿ—ಮಹೇಶ್

ಶೂದ್ರ ಬರದಿದ್ದರೆ ಪತ್ರಬರೆಯಿರಿ, ಚಂದಾ ಕಳಿಸಿ. ಲೇಖನ ಕಳಿಸುವಾಗ
15 ಪೈಸೆಯ ರಿಪ್ಲೈ ಕಾರ್ಡಿಡಿ. ಚೆಕ್ ಮೂಲಕ ಚಂದಾಕಳಿಸುವವರು
2ರೂ ಹೆಚ್ಚುವರಿ ತುಂಬಿ.

ವಾರ್ಷಿಕ ಚಂದಾ : 25 ರೂ. ಆಜೀವ ಚಂದಾ : 250 ರೂ. (ಐದು ಕಂತುಗಳಲ್ಲಿ)

ಈ ಸಂಚಿಕೆಯಲ್ಲಿ ಪಿ. ಆರ್. ತಿಪ್ಪೇಸ್ವಾಮಿ, ಚಿಕ್ಕವೀರಯ್ಯ ಹಾಗೂ ರಮಾಕುಮಾರಿ
ಯವರ ಲೇಖನ/ಕವನವನ್ನು ಪುಟಗಳ ಸಮಸ್ಯೆಯಿಂದ ಪ್ರಕಟಿಸಲಾಗಲಿಲ್ಲ.
ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು.

ಮುಖಪುಟ ಕಲೆ : ನಂದಲಾಲ್ ಬೋಸ್.
ಹಿಂಬದಿ ಪುಟ : ಹೆಬ್ಬಾರ್.
(ಕೃಪೆ : ಎನ್. ಮರಿಶಾಮಾಚಾರ್)

ಶೂದ್ರ ಶ್ರೀನಿವಾಸ್, ಸುದ್ದುಗುಂಟೇಪಾಳ್ಯ, ಡಿ. ಆರ್. ಕಾಲೇಜುಅಂಚೆ,
ಬೆಂಗಳೂರು–560 029

ಮಧ್ಯ ಪ್ರದೇಶ ಸರ್ಕಾರದ ಪ್ರತಿಷ್ಠಿತ ಕಬೀರ್ ಕಾವ್ಯ ಪ್ರಶಸ್ತಿಯನ್ನು ಕನ್ನಡದ
ಹಿರಿಯ ಕವಿ ಗೋಪಾಲಕೃಷ್ಣ ಅಡಿಗರು ಪಡೆದಿದ್ದಕ್ಕೆ ಶೂದ್ರ ಅಭಿನಂದಿಸುತ್ತೆ.

# ಗಿರಡ್ಡಿಯವರ ಪ್ರೌಢಪ್ರಜ್ಞೆ

—ಎಸ್. ಎಸ್. ಹಿರೇಮಠ

ನಮ್ಮ ಸಮಾಜ ಹುಟ್ಟಿ ಬೆಳೆದು ಬಂದ ರೀತಿಯ ವಸ್ತುನಿಷ್ಠ ಮತ್ತು ವೈಜ್ಞಾನಿಕ ಅಭ್ಯಾಸದ ಅಗತ್ಯ ಹಾಗೆ ಉಳಿಯುತ್ತಿದೆ.

ಊಳಿಗಮಾನ್ಯ ಅವಶೇಷಗಳನ್ನು ಒಳಗೊಂಡಿರುವ ನಮ್ಮ ಬಹುಪಾಲು ಹಳ್ಳಿಗಾಡು ಸಮಾಜದಲ್ಲಿ ಭೂತಕಾಲದ ಪಳೆಯುಳಿಕೆಗಳಾಗಿ ಇಂದಿನ ಜನಪದ ಕಾವ್ಯವು (ಸಾಹಿತ್ಯ ಒಟ್ಟಾಗಿ) ಪ್ರಕ್ರಿಯೆಗೆ ಒಳಪಡುತ್ತ ಉಳಿದು ಬಂದಿದೆ.

ಭೂತಕಾಲವೆಂದಾಗ ಎಲ್ಲಿಯವರಿಗೆ ಅದನ್ನು ಎಳೆದೊಯ್ಯುವುದು, ದೊಡ್ಡ ಪ್ರಶ್ನೆ. ಅಂತೂ ಭೂತದಲ್ಲಿ ಬೇರುಬಿಟ್ಟು ವರ್ತಮಾನದಲ್ಲಿ ಬದುಕುಳಿದಿರಲು ಕಾರಣ ಅದು ಪರಂಪರಾಗತವೂ, ಮೌಖಿಕವೂ, ಅಲಿಖಿತವೂ, ಮತ್ತು ನಿರಂತರ ಬದಲಾವಣೆಗೆ ಒಳಪಡುತ್ತ ಬಂದಿರುವುದೂ ಆಗಿದೆ.

ನಮ್ಮ ಸಮಾಜದ ಸ್ವರೂಪವನ್ನು ಅರಿತುಕೊಳ್ಳದೇನೆ ಅದರಿಂದ ಹುಟ್ಟಿ ಬಂದ ಜನಪದ ಸಾಹಿತ್ಯವನ್ನು ಸಹ ಅರ್ಥೈಸಿತಿಳಿಸುವುದು ಆಭಾಸದ ಪರಮಾವಧಿ ಆದೀತು. ಹಾಗಾಗಿ ಇಂದು ಬದುಕುಳಿದಿರುವ ಜನಪದ ಸಾಹಿತ್ಯದ, ಹಿಂದನ್ನು ಅದು ಹುಟ್ಟಿ ಬೆಳೆದು ಬಂದ ಸಮಾಜ ಸ್ವರೂಪವನ್ನು ಅರಿಯಬೇಕು. ಜಾತಿ ಬದ್ಧ ಭಾರತದ ಸಾಮ್ರಾಜಶಾಹಿ ಸಮಾಜದ ಲಕ್ಷಣಗಳು ಸ್ಥೂಲವಾಗಿ—ಒಂದೆಡೆ ಚಕ್ರವರ್ತಿಗಳು, ರಾಜರು, ಮಂಡಲಿಕರು, ಪಾಳೆಯಗಾರರು, ಗೌಡರು, ವ್ಯಾಪಾರಿಗಳು ಅಗ್ರಹಾರಗಳು ಬ್ರಾಹ್ಮಣರು, ದೇಗುಲ-ಮಠಗಳ ವೀರಶೈವರ ಮತ್ತು ಶಿಕ್ಷಕವರ್ಗ; ಇನ್ನೊಂದೆಡೆ ಜೀತದಾಳುಗಳು, ನಾನವಿಧ ಗೇಣಿದಾರಿ ರೈತರು, ಕರಕುಶಲಕರ್ಮಿಗಳು (ಕಂಬಾರ, ಕುಂಬಾರ, ಚಮ್ಮಾರ, ನೇಕಾರ ಇತ್ಯಾದಿ) ವಿಭಿನ್ನ ದುಡಿವ ಕೆಳ ಜಾತಿಯವರು. ಮೇಲ್ಜಾತಿಯವರು ಸಾಮಾನ್ಯವಾಗಿ ಮೇಲ್ವರ್ಗವೇ ಆಗುಳಿಯಲು ಎಲ್ಲ ಅವಶ್ಯಕ ಅನುಕೂಲಗಳನ್ನು 'ವ್ಯವಸ್ಥೆ' ಒದಗಿಸಿಕೊಟ್ಟಿತ್ತು. (ಇದರ ವಿವರ ಮತ್ತೊಂದು ಲೇಖನದ ವಸ್ತು)

---

ಎಸ್. ಎಸ್. ಹಿರೇಮಠ, [illegible] ಗುಡಿ ಎದುರು, ಕೊಟ್ಟೂರು ರಸ್ತೆ, ಹರಪನಹಳಿ ಬಳ್ಳಾರಿ ಜಿಲ್ಲೆ.

ಜನಪದ ಸಾಹಿತ್ಯವು ಇಂಥ ಸಮಾಜದಲ್ಲಿ ಅಪಾರ ದುಡಿವ ಜನಕೋಟಿಯ ನೋವು ನಲಿವು, ಪ್ರತಿಭಟನೆ, ಹಿತಗಳನ್ನು (ವರ್ಗ ಮತ್ತು ಜಾತಿ ಹಿತಗಳನ್ನು) ಎತ್ತಿ ಹಿಡಿವ ಒಂದು ನಿರ್ದಿಷ್ಟ ಸಮಿತಿ ಮತ್ತು ಸಾಧ್ಯತೆಗಳಲ್ಲಿ ಅಭಿವ್ಯಕ್ತವಾಗುತ್ತ ಬಂದಿದೆ.

ಶೋಷಕ ಜಾತಿ ವರ್ಗಗಳನ್ನು ನಾನಾ ಪ್ರಕಾರಗಳಲ್ಲಿ ಪ್ರತಿಭಟಿಸುವ 'ಸಾಧ್ಯತೆ' ಒಂನೆಡೆಯಾದರೆ; ಜಾತಿಗಳಿಂದಾಗಿ ಅನೇಕ ಗುಂಪುಗಳಾಗಿ ಒಡೆಯಲ್ಪಟ್ಟು ಅಸಂಘಟಿತ ರೂಪದಲ್ಲಿ ಅದೇ ಸನಾತನ ರೂಢಿ. ಪದ್ಧತಿ, ಮತೀಯಾ ಜಿಡ್ಡುಗಳಿಗೆ, ಅಂಟಿಕೊಂಡಿದ್ದ ಮಿತಿ ಇನ್ನೊಂದೆಡೆ ಕಂಡುಬರುವುದು. ಈ ಮಿತಿಯಲ್ಲಿ ಜೀವವಿರೋಧಿ ನಿಲವುಗಳು, ಆಶಯಗಳು ವ್ಯಕ್ತವಾಗುತ್ತವೆ. ಇದಕ್ಕೆ ಕಾರಣ ಶೀಕ್ಷಕವರ್ಗ ಹಿತ ಸಂರಕ್ಷಕ, ಪಾರಲೌಕಿಕ ಪಾರಮ್ಯವನ್ನು ಎತ್ತಿಹಿಡಿದ ಆಧ್ಯಾತ್ಮಿಕ ದೃಷ್ಟಿಕೋನದ ಅತ್ಯಂತ ಗಾಢವಾದ, ಆಳವಾದ, ವ್ಯಾಪಕವಾದ ಪ್ರಭಾವ. ಇದು ಆ ಕಾಲದ ಉತ್ಪಾದಕ ಶಕ್ತಿಗಳ ಬೆಳವಣಿಗೆಯ ಮಟ್ಟಕ್ಕನುಸಾರವಾಗಿದ್ದ ಉತ್ಪಾದನಾ ಸಂಬಂಧಗಳ ಅಂದರೆ ಸಮಾಜದ ತಳಹದಿಯಾದ ಆರ್ಥಿಕ ರಚನೆಯ ಆಧಾರದಲ್ಲಿ ಮೂಡಿ ಬಂದಿದ್ದ ಶೋಷಕವರ್ಗ ಪರ ತತ್ತ್ವಜ್ಞಾನವೇ ಆಗಿತ್ತು. ಆದರೆ ದೈನಂದಿನ ಅನುಭವಗಳ ಸತ್ಯದ ಪ್ರಖರತೆಯ ಎದುರು ಆಧ್ಯಾತ್ಮದ ಜಳ್ಳುಕತ್ತಲೆ ತೂರಿಹೋದುದು ಅಲ್ಲಲ್ಲಿ ಕಾಣುತ್ತೇವೆ. ಇದನ್ನು 'ಬಂಡಾಯ' ಎಂಬ ವಿಶಾಲಾರ್ಥದಲ್ಲಿ ಕರೆಯಬಹುದು. 'ಬಂಡಾಯ'ಎಂಬ ಪದ ಒಂದೇ ರೀತಿಯ, ನೇರವಾದ ಪ್ರತಿಭಟನೆ ಎಂಬ ಸಂಕುಚಿತಾರ್ಥದಲ್ಲಿ ಇಂದು ಬಳಕೆಯಾಗುತ್ತಿಲ್ಲ: ಆಗಬಾರದು. ಶೋಷಕವರ್ಗ ಹಿತವನ್ನು ಯಾವುದೇ ರೀತಿಯಿಂದ, ಎಷ್ಟೇ ಸೂಕ್ಷ್ಮವಾಗಿ, ಎಂಥದೇ ಮಿತಿಯ ಮಧ್ಯೆಯೂ ವಿರೋಧಿಸುವ ಚಾರಿತ್ರಿಕ ಪ್ರಕ್ರಿಯಾಂಶವನ್ನು 'ಬಂಡಾಯ' ಒಳಗೊಳ್ಳುವುದು.

ಯಾವುದೇ ಕವಿ ಅಥವಾ ವಿಮರ್ಶಕನ ವಿಚಾರಗಳು ಅವನ ವರ್ಗ ದೃಷ್ಟಿಕೋನವನ್ನು ಅವಲಂಬಿಸಿರುತ್ತವೆಂಬುದು (ಅವನಿಗೆ ಅರಿವಿದ್ದೋ ಅರಿವಿಲ್ಲದೆಯೂ) ಈವೊತ್ತಿನ ಬದಲಾದ ಸಾಹಿತ್ಯಕ ಮಾನದಂಡಗಳಲ್ಲಿ ಪ್ರಧಾನ ಅಸ್ತ್ರವಾಗಿದೆ.

'ಜನಪದ ಕಾವ್ಯ' ಎಂಬ ತಮ್ಮ ಪುಸ್ತಿಕೆಯ ಮುನ್ನುಡಿಯಲ್ಲಿ ಶ್ರೀ ಗಿರಡ್ಡಿ ಗೋವಿಂದರಾಜ ಅವರು ತಮಗರಿವಿಲ್ಲದಯೆ ಈ ವರ್ಗದೃಷ್ಟಿಕೋನವನ್ನಿಟ್ಟುಕೊಂಡ ಬಗ್ಗೆ ದಾಖಲಿಸುತ್ತಾರೆ. ಕಾವ್ಯಕ್ಕೆ ಪ್ರತ್ಯೇಕ ಮಾನದಂಡಗಳಿವೆ ಎಂದು ಒಪ್ಪದ ಗಿರಡ್ಡಿಯವರು ಶ್ರೇಷ್ಠ ಕಾವ್ಯದ ಜತೆ (ಶಿಷ್ಟ? ಜನಪದ ಕಾವ್ಯವನ್ನು ಹೋಲಿಸಿ ನೋಡಲು ಹೋಗಿ "ಈ ಅಭ್ಯಾಸದ ಕಾಲಕ್ಕೆ ನನ್ನ ಮನಸ್ಸಿನಲ್ಲಿದ್ದುದು ಉತ್ತಮ

ಜನಪದ ಕಾವ್ಯ ಮತ್ತು ಉತ್ತಮ ನಾಗರಿಕ ಕಾವ್ಯ" ಎಂದು ಹೇಳುವಲ್ಲಿ ಭೇದವನ್ನು ಗುರುತಿಸಿದರೂ ಅವುಗಳ ವರ್ಗ ಸ್ವಾಭಾವ, ಸಾಧ್ಯತೆಗಳನ್ನು ಗುರುತಿಸುವ ಗೋಜಿಗೆ ಹೋಗಲಾರರು. ಆದರೆ "ನಾಗರಿಕ ಸಾಹಿತ್ಯಕ್ಕೆ ಇರುವ ಹಾಗೆ ಜನಪದ ಸಾಹಿತ್ಯಕ್ಕೂ ಅವರದೇ ಆದ ಒಂದು ಪರಂಪರೆ ಇದೆ" ಎಂದು ಬರೆಯುತ್ತಾರೆ.

ಜನಪದ ಸಾಹಿತ್ಯ ದುಡಿಯುವ ಜನತೆ ಸಾಂಸ್ಕೃತಿಯ ಮಹತ್ವದ ಭಾಗ. ಶಿಷ್ಟ ಸಂಸ್ಕೃತಿಯನ್ನು ಅದರ ಜತೆ ತಳುಕು ಹಾಕುವುದು ಸರಿಯಲ್ಲ. ಎರಡೂ ಸಾಹಿತ್ಯ ಪರಂಪರೆಗಳು ತಮ್ಮ ವಿಭಿನ್ನ ವರ್ಗ ಸ್ವಭಾವವನ್ನು ಪ್ರತಿಪಾದಿಸುತ್ತ ಬಂದ ಪರಿಯನ್ನು ಬಹಳಷ್ಟು ಅಥವಾ ಬಹುತೇಕ ವಿಮರ್ಶಕರು ಗುರುತಿಸಲಾರದೆ ಮೋಸ ಹೋದರು, ಮತ್ತು ಅಪಾಯವನ್ನುಂಟು ಮಾಡಿದರು.

ಜನಪದ ಕಾವ್ಯದ ವಿಮರ್ಶೆ "ಅನೇಕ ದೃಷ್ಟಿಯಿಂದ ಅಪೂರ್ಣವೂ, ಅಸಮಂಜಸವೂ ಆಗಿದೆ" ಎಂದು ಹೇಳುವ ನವ್ಯಸಾಹಿತ್ಯ ಪ್ರತಿಪಾದಕ, ಸಮರ್ಥಕ, ವಿಮರ್ಶಕ ಗಿರಡ್ಡಿ ಗೋವಿಂದರಾಜ ಅವರು "ಜನಪದ ಕಾವ್ಯದಲ್ಲಿ ಮೌಲ್ಯ ಪ್ರಜ್ಞೆ" ಎಂಬ ಲೇಖನದಲ್ಲಿ ["ನವ್ಯ ವಿಮರ್ಶೆ"—ಅಕ್ಷರ ಪ್ರಕಾಶನ-ಪುಟ 82-95] ನವೋದಯ ಕಾಲಘಟ್ಟದ [ಶಿನಂಶ್ರೀ. ಗೋರೂರು] ವಿಮರ್ಶಕರ ಮಿತಿಗಳನ್ನು ಸಾಧಾರವಾಗಿ ಎತ್ತಿತೋರಿಸಿ "ಶ್ರೇಷ್ಠ ಸಾಹಿತ್ಯ ಹೌದೊ ಅಲ್ಲವೊ ಎಂಬುದನ್ನು" ನಿರ್ಣಯಿಸಲು "...ಜನಪದ ಕಾವ್ಯ ಶ್ರೇಷ್ಠ ಸಾಹಿತ್ಯವಾಗಲಾರದು" ಎಂಬುದನ್ನು ತೋರಿಸಲು "ಅಸಾಹಿತ್ಯಿಕ ಮಾನದಂಡಗಳನ್ನು ತರಬೇಕಾಗುತ್ತದೆ" (83 ಪುಟ) ಎಂದು ಹೇಳುತ್ತ "ಆ ಮಾನದಂಡಗಳಲ್ಲಿ ಕವಿಯ ಮೌಲ್ಯ ಪ್ರಜ್ಞೆ ಮಹತ್ವದ್ದು" ಎನ್ನುತ್ತಾರೆ.

ಲೇಖನದ ಉದ್ದೇಶ ಜನಪದ ಕಾವ್ಯ ಎಷ್ಟು ಶ್ರೇಷ್ಠ ಎಂಬುದನ್ನು ಅಳೆಯಲು ಸೀಮಿತವಾಗುತ್ತದೆ. ಆದರೆ ಇದನ್ನು ನಿರ್ಣಯಿಸುವಾಗ ಅವರು ಕೈಗೊಳ್ಳುವ ವಿಶ್ಲೇಷಣೆಯಲ್ಲಿ ಕೆಲವು ಮಹತ್ವದ ವಿಚಾರಗಳ ಜತೆಗೆ ನವ್ಯರ, ಮಿತಿಯೂ, ಕೊರತೆಯೂ ಸುಸ್ಪಷ್ಟವಾಗಿ ದೃಗೋಚರವಾಗುವದು. ವಿಶ್ಲೇಷಣೆಯ ಪ್ರಥಮದಲ್ಲೇ ಗೊಂದಲ ಸುವ್ಯಕ್ತ. "ಇಲ್ಲಿಯ ಮೌಲ್ಯಗಳೆಲ್ಲ ಸಮಾಜ ಸಮ್ಮುಖವಾದವು. ಜನಪದ ಕವಿಗಳೆಲ್ಲ ತಮ್ಮ ಸಮಾಜ ವ್ಯವಸ್ಥೆಗೆ ಒಪ್ಪಿತವಾಗಿದ್ದ ಮೌಲ್ಯಗಳನ್ನು ತಾವು ಒಪ್ಪಿಕೊಂಡರು", "ಜನಪದ ಕಾವ್ಯದಲ್ಲಿ ಬಂಡಾಯದ ಧ್ವನಿ ಕೇಳಿ ಬರುವುದೇ ಇಲ್ಲ" (ಪು. 83) ಎನ್ನುತ್ತಾರೆ. ಈ ಮಾತು ನವ್ಯರು ಭಾವಿಸುವ ವ್ಯಕ್ತಿನಿಷ್ಠತೆ, ಕಲೆಗಾಗಿ ಕಲೆ ಮುಂತಾದ ತಪ್ಪು ಧೋರಣೆಗಳನ್ನು ಹೋಲುವದು. ಯಾವ ಕವಿಯೂ ತಾನು ಬದುಕಿದ್ದ ಸಮಾಜ ವ್ಯವಸ್ಥೆಯ ಕೂಸಾಗಿ, 'ಬಲಿ ಪಶುವಾಗಿ' ಅಥವಾ ಅದನ್ನು ಪ್ರಶ್ನಿಸಿ, ಅಂತಹ ಸಮಾಜ

ಸಮ್ಮುಖಿನೇ ಆಗಿರುತ್ತಾನೆ. ಬೇಂದ್ರೆಯವರ 'ಬೆಳಗು'ದಂಥ 'ನಿಸರ್ಗ ಗೀತೆ'ಯಲ್ಲೂ ಶಾಂತಿರಸದ ಪ್ರಸ್ತಾಪದಲ್ಲಿ ಈ ಲಕ್ಷಣವನ್ನು ಗುರುತಿಸಬಹುದು.

"ಒಪ್ಪಿತ ಸಾಮಾಜಿಕ ಮೌಲ್ಯಗಳು ವ್ಯಕ್ತಿ ಬದುಕಿನ ಹಕ್ಕಿಗೆ ಅಡ್ಡಿಯಾದಾಗ ವಿರೋಧಿಸುವ ಬಂಡಾಯ ದನಿ ಎಲ್ಲೂ ಕೇಳಿ ಬರುವುದೇ ಇಲ್ಲ" ಎಂದು ಹೇಳುವ ಗಿರಡ್ಡಿಯವರು ಸುಪ್ರಸಿದ್ಧ 'ಕೆರೆಗೆ ಹಾರ' ಕಥನ ಗೀತೆಯನ್ನು ವಿಶ್ಲೇಷಿಸಿ ಸಮರ್ಥಿಸ ಲೆತ್ನಿಸಿದ್ದಾರೆ.

ಪ್ರತಿಭಟನೆಯ ಧ್ವನಿ ಕಾಣದೆ ಇರಲು ಗಿರಡ್ಡಿಯವರು ಕೊಡುವ ಮೂರು ಕಾರಣಗಳಲ್ಲಿ ಮೊದಲಿನ 'ಕರ್ಮತತ್ವ' ["ವಾಸ್ತವ ಸತ್ಯವನ್ನು ಅಲಕ್ಷಿಸುವ ದುಃಖಿಕ್ಕೆಲ್ಲ ಅಮೂರ್ತವಾದ ಕರ್ಮತತ್ವ"] ಆಳುವ ವರ್ಗ ಹಿತರಕ್ಷಕ ಆಧ್ಯಾತ್ಮಿಕ ತತ್ವಜ್ಞಾನದ ಪ್ರಮುಖ ಅಂಶವೂ ಅದರ ದಟ್ಟ ಪ್ರಭಾವದಿಂದ ಜನರಲ್ಲಿ ಬಂದುದೂ ನಿಜ. ಆದರೆ ಗಿರಡ್ಡಿಯವರು ಹೇಳುವ ಇನ್ನೆರಡು ಕಾರಣಗಳು ತರ್ಕಹೀನ. ["ಸರಳವಾದ ಮುಗ್ಧ ಮನೋಭಾವದಿಂದಾಗಿ ಮೌಲ್ಯಗಳು ಸರಳಗೊಳಿಸಿದ ನೀತಿಗಳಾದವು ಜನಪದರಿಗೆ. ಸೂಕ್ಷ್ಮ ಸಂವೇದಿತ್ವವು ಬಹು ಜನಕವಿಗಳಿಗೆ ಇದ್ದಂತಿಲ್ಲ." "ಜನಪದ ಕವಿ ಬದುಕಿದ ಸಮಾಜ ಸಮಷ್ಟಿ ಪ್ರಜ್ಞೆ ಹೆಚ್ಚು ಜೀವಂತವಾಗಿದ್ದ ಸಮಾಜ."] ಇದಕ್ಕೆಲ್ಲ ಇವರು ಉದಹರಿಸುವ ಕೆರೆಗೆ ಹಾರ ಪದ್ಯದ ಸಂಕೀರ್ಣತೆಯನ್ನೇ ನೋಡಿದರೆ ಅದು ಸರಳವೂ ಅಲ್ಲ, ಸೂಕ್ಷ್ಮ ಸಂವೇದಿತ್ವ ಇಲ್ಲವೂ ಎಂದಲ್ಲ. ವ್ಯಷ್ಟಿ ಪ್ರಜ್ಞೆಯ ಅಭಾವವೂ ಅಲ್ಲಿ ಕಾಣಿಸದು.

ಬಂಡವಾಳ ಶಾಹಿ ಸಮಾಜದ ಬೆಳವಣಿಗೆಯ ಜತೆಗೆ ವ್ಯಷ್ಟಿ ಭಾವನೆಯ ಒಂಟಿ ತನದ, ಅನಾಥೆಯ, ಪರಕೀಯತೆಯ. ಭಾವನೆಗಳಾಗಲಿ, ಅದಕ್ಕೂ ಮೊದಲು ನವ್ಯರು ವಿರೋಧಿಸಿದ ರೊಮ್ಯಾಂಟಿಕ್ ಭಾವನೆಗಳಾಗಲಿ ಹೇಗೆ ಮತ್ತು ಏಕೆ ಬೆಳೆದು ಬಂದುವೆಂಬುದನ್ನು ಪ್ಲೆಖನೋವ್, ಕಾಡ್ವೆಲ್, ಥಾಮ್ಸನ್ ಮುಂತಾದವರು ವಿವರಿಸಿದ್ದಾರೆ.

ಗಿರಡ್ಡಿಯವರ ತಲೆಯಲ್ಲಿ ವ್ಯಷ್ಟಿ ಮತ್ತು ಸಮಷ್ಟಿ ಪ್ರಜ್ಞೆಗಳ ಬಗ್ಗೆ ಗೊಂದಲ ವಿದೆ. ಈ ಗೊಂದಲ ನವ್ಯರ ಒಂದು 'ಮಿತಿ'ಯಾಗಿತ್ತು. ಅವರು ಈ ವಾದವನ್ನು ನವ್ಯ ಕಾವ್ಯದ ಸಮರ್ಥನೆಯಲ್ಲಿ ಪ್ರಮುಖ ಅಸ್ತ್ರವಾಗಿ ಬಳಸಿದರು. ಈ ಕಣ್ಣೋಟವೇ 'ಕೆರೆಗೆ ಹಾರ' ಜನಪದ ಕವಿಯನ್ನು ಅಳೆಯಲು, ತೆಗಳಲು ಹಚ್ಚಿರುವುದು.

ಇವರು ವ್ಯಕ್ತಿಯ ಹಿತ, ಆಶಯ, ಮೌಲ್ಯ ಎಲ್ಲವೂ ಸಮಾಜದ ಹಿತ, ಆಶಯ, ಮೌಲ್ಯಗಳ ಪರಿಧಿಯಲ್ಲೇ, ಅದರ ಇತಿಮಿತಿಯಲ್ಲೇ ರೂಪುಗೊಳ್ಳುವುದರ ಜೈವಿಕ



ಶೂದ್ರ

ಸಾಮಾಜಿಕ ಸಂಬಂಧವನ್ನು (ಅಂದರೆ ವ್ಯಕ್ತಿ-ಸಮಾಜಗಳ ಸಂಬಂಧ) ಅನಿವಾರ್ಯತೆ, ಗಾಢತೆಯನ್ನು ಅರಿಯದೆ ಹೋದರು.

ಕೆರೆಗೆ ಹಾರ ಈಚೆಗೆ ಸಮುದಾಯದ ನಾಟಕವಾಗಿಯೂ ಸಹ ಜನರೆದುರು ಬಂದು ಹೆಚ್ಚು ಪ್ರಸ್ತುತವಾಗಿರುವುದರಿಂದ ; ಈ ಗೀತೆಯನ್ನು ಶ್ರೀನಂಶ್ರೀ. ಗೋರೂರು ಗಿರಡ್ಡಿಯವರು ತಮ್ಮ ತಮ್ಮ ವಾದಗಳಿಗೆ ಆಧಾರ ಮಾಡಿಕೊಂಡಿರುವುದರಿಂದ ಅದನ್ನೇ ನಾವು ನೋಡಬಹುದು.

ಕಲ್ಲನಕೇರಿ ಮಲ್ಲನಗೌಡ ಪಾಳೇಗಾರಿ ವ್ಯವಸ್ಥೆಯ ಶೋಷಕಾಂಗ. ಅವ ತನ್ನ "ಆದಾಯ ಹೆಚ್ಚಿಸಿಕೊಳ್ಳಲು" ಕೆರೆಯನ್ನು ಕಟ್ಟಿಸಿದ. ಬಹುಶಃ ಮೇಲೆ ಉಲ್ಲೇಖಿಸಿದ ಎಲ್ಲ ವಿಮರ್ಶಕರು, ಅಂದುಕೊಂಡಂತೆ "ಇಡೀ ಸಮಾಜದ ಹಿತ"ಕ್ಕಾಗಿ ಅಲ್ಲ, ಇಲ್ಲಿ ಅವನ ಆದಾಯದ ಹಿತವೇ ಪ್ರಧಾನ. ಕೆರೆಯ ಕೆಳಗಿನ ಹೊಲಗಳೆಲ್ಲ ಅಥವಾ ಹಳ್ಳಿಯ ಒಟ್ಟಾರೆ ಭೂಮಿಯೆಲ್ಲಾ ಗೌಡ, ಮಠ, ಅಗ್ರಹಾರದ ಬ್ರಾಹ್ಮಣರ ಸಂಪೂರ್ಣ ಸ್ವತ್ತಾಗಿದ್ದವು. ಇವಕ್ಕೆ ಬೇಕಾದಷ್ಟು ಸಾಕ್ಷಿಗಳನ್ನು ಶಾಸನಗಳಿಂದ ಒದಗಿಸಬಹುದು, ಒಂದು ಸಣ್ಣ ಉದಾ : ರಾಮರಾಜ ಪುಟ್ಟರಾಜ ಅರಸಿನವರು ಬರೆದ "ಚೆಂಗಾಳ್ವ ಚಲುವಾಂಬ" ಎಂಬ ತಮ್ಮ ಆತ್ಮಕಥನ ರೂಪದ ಕಾದಂಬರಿಯ ಮೊದಲ, ಪುಟದಲ್ಲಿ "ನಾನು ಪಿರಿಯಾಪಟ್ಟಣದ ಸೀಮೆಯವನು ಅರಸುಮನೆತನಕ್ಕೆ ಸೇರಿದವನು... ನನ್ನ ಊರು ಪಿರಿಯಾಪಟ್ಟಣದಿಂದ ಮೂರು ಹರಿದಾರಿ ದೂರದ ಊರು "ದೇವೂರು". ಈ ಊರಿನ ಭೂಮಿಯೆಲ್ಲ ನನ್ನ ತಂದೆಯದು".

ಹರಪನಹಳ್ಳಿಯ ದೊಡ್ಡ ಕೆರೆಯ ಕೆಳಗಿನ ನೀರಾವರಿಗೆ ಒಳಪಡುವ ಭೂಮಿಯೆಲ್ಲಾ ಈಗಲೂ ಈ ಊರ ಗೌಡರದ್ದೇ ಆಗಿದೆ. ಗೌಡನಂಥ ಶೋಷಕ ವರ್ಗದ ಹಿತವು ದುಡಿಯುವ ವರ್ಗ ಮತ್ತು ಸ್ತ್ರೀಯರನ್ನು ಹಿಂಸಿಸುವುದರಲ್ಲಿ ಅಡಗಿದೆ ಎಂಬ ದನಿಯನ್ನು ಈ ಪದ್ಯದಲ್ಲಿ ನಾವು ಕೇಳುತ್ತೇವೆ. ["ಸತಿಯೊಡನೆ ಸಹಗಮನ" ನಾಟಕದಲ್ಲಿ ಗೌಡನನ್ನು (ರಾಯಚೂರು ಸಮುದಾಯದ್ದು) ಯಥಾವತ್ತಾಗಿ ನೋಡಿದಂತೆ ಕಾಣದು] ಶೋಷಕಗೌಡ ತನ್ನ ವರ್ಗಹಿತ ರಕ್ಷಕನಾದ ಜೋಯಿಸನ ಹತ್ತಿರ ಪರಿಹಾರ ಕೇಳಹೋಗುವುದು ಸಹಜವೇ. ಜೋಯಿಸ ಎಂಥ ಸಮಸ್ಯೆಗೂ ಯಾವ ವಿಧದ ಪರಿಹಾರ ಕಾಣಬಲ್ಲನೆಂಬುದೂ ಶತಸಿದ್ಧ, "ದೇವರಲ್ಲ ದಿಂಡರಲ್ಲ, ದೆವ್ವಲ್ಲ ಭೂತಲ್ಲ" ಎಂದರೂ ಸಹ ಅದೇ ಮೂಢನಂಬಿಕೆಯ "ಹಿರಿಸೊಸಿ ಮಲ್ಲವನ ಹಾರವನ್ನು ಕೊಡಲು ಹೇಳುವಂಥದು.

ಬಲಿಕೊಡುವ ಪದ್ಧತಿ ಬದಲಾದ ಇಂದಿನ ಸಾಮಾಜಿಕ ಸ್ಥಿತಿಯಲ್ಲಿ ಪ್ರಶ್ನಿತ, ಬಲಿಯ ಅಂದಿನ ಅಸಂಖ್ಯ ಪ್ರಕಾರಗಳಲ್ಲಿ ನೀರು ಬರದೆ ಇದ್ದಾಗ ಕೊಡುವುದೂ

ಒಂದು. ಈ ರೀತಿಯ ಹಿಂಸೆಗಳು ಅಮಾನವೀಯವೂ, ಕ್ರೂರವೂ ಆಗಿದ್ದರೂ ವಿಧಿನಿಯಮ, ಧಾರ್ಮಿಕವೆಂದು ಪ್ರತಿಪಾದಿಸಲ್ಪಡುತ್ತಿದ್ದ ಪಾಳೇಗಾರಿ ಸಮಾಜ' ವ್ಯವಸ್ಥೆಗೆ ಸಹಜವಾಗಿದೆ. [ಹಿಂಸೆಯ ವಿವಿಧ ಪ್ರಕಾರಗಳಿಗೆ ಡಾ॥ ಎಂ, ಚಿದಾನಂದ ಮೂರ್ತಿಯವರ 'ಥೀಸಿಸ್' ನೋಡಬಹುದು] ಹಿರಿಮಗ, ಹಿರಿಸೊಸಿ, ಹಿರೇತನ ಮುಂತಾದ ಪದಗಳು ಒಸರುವ ಅರ್ಥದಲ್ಲೂ ಪಾಳೇಗಾರಿ ಅವಿಭಕ್ತ ಕುಟುಂಬದ ಜೀವಂತಿಕೆ ಇದೆ.

ಕಡೆಸೊಸಿ ಭಾಗೀರತಿಯನ್ನು ಹಾರ ಕೊಡಬೇಕೆಂದು "ಮಾತಾತು ಮನಿಯಾಗ" ಅಂದರೆ ಹಾರದ ಬಗ್ಗೆ ಕುಟುಂಬದಲ್ಲಿ ಮುಕ್ತ ಚರ್ಚೆ ಆಗಿದೆ.

ಸಹಜವಾಗೇ ಸಾವಿಗೆ ಹೆದರಿದ ಭಾಗೀರತಿ ತನ್ನ ತವರುಮನೆಗೆ ಬಂದು ಅವ್ವ, ಅಪ್ಪ, ಅಕ್ಕ, ಕೊನೆಗೆ ಗೆಳತಿಯನ್ನು ಕಂಡು ತನ್ನ ಸಂಕಟವನ್ನು ವಿಭಿನ್ನ ರೀತಿಯಿಂದ ತೋಡಿಕೊಳ್ಳುವಳು. ಇಲ್ಲೆಲ್ಲ ಕವಿಯ ಸೂಕ್ಷ್ಮ ಸಂವೇದಿತ್ವವೇ ಕೆಲಸ ಮಾಡಿರುವುದು; ಅತ್ತೆ ಹೇಳುವಳು "ಸರ್‍ರನೆ ಹೋಗವ್ವ ಬರ್‍ರನೆ ಬಾರವ್ವ". ಈ ಅವಸರದಲ್ಲಿ ಆತ್ಮೀಯತೆ, ಕಕ್ಕುಲಾತಿ ಇಲ್ಲ, ಕರ್ತವ್ಯದ ಬಗ್ಗೆ ಎಚ್ಚರಿಕೆ ಕೊಡುವ ಕರುಣೆಯ ಧಿಮಾಕಿದೆ. ಆಕೆಯ ಅಪ್ಪ, ಅವ್ವ, ಅಕ್ಕ ಗೆಳತಿಯರು "ಇಟ್ಟರೆ ಇಡಲೇಳು" ಎಂದೇ ಹೇಳುವರು. ಇದು ಸಮಾಜ, ಬಲಿಯನ್ನು ಒಪ್ಪಿಕೊಂಡ ಅನಿವಾರ್ಯತೆಯನ್ನು ವಿಡಂಬಿಸುವ ದಾಟಿ– "ಹೊಲಮನಿ ಹೊಳಿದಂಡ್ಯಾಗ ಹಾಕು", "ವಾಲೀ ಒಟ್ಟಾಗ ಹಾಕು" ಮಕ್ಕಳು ಸಾವಿನ ದುಃಖ ಕಳದಾವೇನು ಮುಂತಾಗಿ ಭಾಗೀರತಿಯ ಮಾತುಗಳಲ್ಲಿ ವೈಯಕ್ತಿಕ ಹಿತದ ಬಗ್ಗೆ ಕವಿದಿದ್ದ ಆತಂಕಕ್ಕೆ ಸಾಕ್ಷಿಯಾಗುತ್ತವೆ. ಕವಿ ಭಾಗೀರತಿಯ ಪರವಾಗೆ ಇದ್ದಾನೆ. "ತುಂಬಾ ಸೂಕ್ಷ್ಮವಾಗಿ ಇಡೀ ಪ್ರಕರಣದಲ್ಲಿ ಭಾಗೀರತಿಗಾದ ಅನ್ಯಾಯವನ್ನು" ಕವಿ ನಿವೇದಿಸಿದ್ದಾನೆ (ಪುಟ 95) ಮುಂತಾದ ಪಾವೇಂ. ಆಚಾರ್ಯರ ಮಾತುಗಳನ್ನು ಗಮನಿಸಬಹುದು. ಕವಿ ಬದುಕಿದ್ದ ಸಮಾಜದ ಸಮಷ್ಟಿ ಹಿತದಲ್ಲಿ "ಹೊಲಮನೆ, ವಾಲಿ, ಮಕ್ಕಳು" ಸೇರಿರುತ್ತಾರೆ. ಅವನ್ನೆಲ್ಲ ಧಿಕ್ಕರಿಸಿ ಈ ಯಾವ ಆಶೆಯೂ ತನ್ನ ಬಲಿಯೆದುರು ನಿರರ್ಥಕ ಎಂದು ಹೇಳಿಸುತ್ತ ಹೋಗುವಲ್ಲಿ ಕವಿಯ ಸೂಕ್ಷ್ಮ ಸಂವೇದಿತ್ವ ಇಲ್ಲವೆ ? ವಾಲಿ, ಮಕ್ಕಳು, ಹೊಲಮನೆಗಳಲ್ಲೇ ಅಲ್ಲವೇ ವ್ಯಕ್ತಿ (ಭಾಗೀರತಿ–ವ್ಯಷ್ಟಿ ಹಿತ) ಆ ಸಮಾಜದಲ್ಲಿ ತನ್ನ ಹಿತವನ್ನು ಗುರುತಿಸಿಕೊಂಡದ್ದು.

ಭಾಗೀರತಿಯನ್ನು ಅಪ್ಪ, ಅವ್ವ, ಅಕ್ಕ, ಗೆಳತಿಯರೆಲ್ಲ ಬಾಗಿಲಲ್ಲೇ ಕಾಣುತ್ತಾರೆ. ಜನಪದ ಕಾವ್ಯಕ್ಕೆ ತೀರಾ ಸಹಜವಾದ ಕೈಕಾಲಿಗೆ ನೀರು ಕೊಡುವ ಕುಂಡ್ರಲು ಮಣೆ ಹಾಕುವ ಯಾವ 'ಉಪಚಾರವೂ' ನಡೆಯುವುದಿಲ್ಲ. ಬದಲಿ, 'ಎಂದಿಲ್ಲದ ಭಾಗೀರತಿ ಇಂದ್ಯಾಕ ಬಂದಿ' ಎನ್ನುವರು !

ಭಾಗೀರತಿಯ ಕಣ್ಣ ನೀರು, ದುಃಖ, ಅಳು ಎಲ್ಲ ಈ ಇಡೀ ಸಂದರ್ಭದಲ್ಲಿ ಕೆರೆಗೆ ನೀರನ್ನು ತರುವುದಕ್ಕೆ ಪ್ರತಿಯಾಗಿ, ಪೂರ್ವ ಭಾವಿಯಾಗಿ ಕಾವ್ಯದಲ್ಲಿ ಕೆಲಸ ಮಾಡುವ ವಿಧಾನವನ್ನು ಗಮನಿಸಿದರೆ ಈ ಕಾವ್ಯದ 'ಭೂಮಯು'ತೆಯು ಅರಿವಾದೀತು. ಮುಂದಿನ ಭಾಗದಲ್ಲಿಯೂ ಇದು ಮುಂದುವರೆದು 'ಕಣ್ಣೀರು' 'ಹತ್ತ ಕೊಪ್ಪರಿಗೆ ನೀರು" "ಜಳಕ" ಗಂಗೆಪೂಜೆ" ಮುಂತಾದ ನಾನಾ ಆಶಯಗಳಲ್ಲಿ ಬೆಳೆಯುತ್ತ ಹೋಗಿ ಹಾರವಲ್ಲಿ ವಿಡಂಬನೆ ಶಿಖರ ಮುಟ್ಟುತ್ತದೆ. "ನೀರಿ"ನ ಪ್ರತಿಮೆ ಇಡೀ ಕಾವ್ಯದ ಬಹು ಮಹತ್ವದ ಸಂಗತಿಯಾಗಿದ್ದು ಕೆರೆಗೆ ಹಾರದ ಶ್ರೇಷ್ಠತ್ವದ ಮುಖ್ಯಾಂಶವಾಗಿದೆ.

ಅಪ್ಪ, ಅವ್ವ, ಅಕ್ಕ, ಗೆಳತಿಯರಿಂದ ಪ್ರತಿಭಟನೆಯನ್ನು ತನ್ಮೂಲಕ ಸಂರಕ್ಷಣೆಯನ್ನು ಅಪೇಕ್ಷಿಸಿ ಬಂದು, ಬಲಿಕೊಡುತ್ತಾರೆಂಬ ಸಂಗತಿಯನ್ನು ಅವರೆಲ್ಲರೆದುರು (ಗೆಳತಿಯರನ್ನು ಬಿಟ್ಟು) ಭಾಗೀರತಿ ''ಬ್ಯಾರೆ ಇಡತಾರಂತ" ಎಂದು ಸೂಚ್ಯವಾಗಿ ಹೇಳುವ ಮಹೋನ್ನತಿಯನ್ನು, ಗುರುತಿಸಬೇಕು. ಅದರ ಒಳ ಅರ್ಥ ಅವರಿಗೆಲ್ಲ ಆದರೂ, ಅವರು ಸಮಾಧಾನ ಮಾಡುವ ರೀತಿಯ ವಿಕೃತತೆಯನ್ನು ಭಾಗೀರತಿಯ ಸಿಟ್ಟಿನ ಮಾತುಗಳು ಎತ್ತಿ ಹೇಳುವವು. ಆದರೆ ಯಾರೂ ಆಕೆಯ ಮಾತುಗಳಿಗೆ ಪ್ರತಿ ಹೇಳುವದೇ ಇಲ್ಲ. (ಆ ಸಮಾಜದ ಬಲಿಪಶುಗಳಲ್ಲವೆ ಅವರೆಲ್ಲ) ಇದೇ ಸೂಚಿಸುತ್ತದೆ. ಅವರಿಗೆಲ್ಲ ಆಕೆ ಬಲಿಯಾಗುವ ಸಂಕಟದಿಂದ ಹೀಗೆ ಕೇಳುತ್ತಾಳೆ, ಹೇಳುತ್ತಾಳೆ ಎಂಬುದನ್ನು ಅರಿತಿದ್ದಾರೆಂಬುದು.

ಗೆಳತಿ ಬಲಿಯಾಗಿ "ಕೊಟ್ಟರೆ ಕೊಡಲೇಳು, ಇಟ್ಟಾಂಗ ಇರಬೇಕು'' ಎನ್ನುತ್ತಾಳೆ. ಇದು ಸಾಮಂತಶಾಹಿ ಸಮಾಜದ (ಹಿಂಸೆಯ ಧಾರ್ಮಿಕ ವಿಧಿಯಾಗಿದ್ದ: ''ಈ ಅಸ್ತಿತ್ವ....ಹಿಂದುಸ್ಥಾನದಲ್ಲಿ ಕೊಲೆಯನ್ನೇ ಒಂದು ಧಾರ್ಮಿಕ ಕರ್ಮವನ್ನಾಗಿ ಮಾಡಿತು, ...ಸಾಮಾಜಿಕ ಸ್ಥಿತಿಯನ್ನು ಎಂದೆಂದಿಗೂ ಬದಲದ ನೈಸರ್ಗಿಕ ವಿಧಿನಿಯಮವನ್ನಾಗಿ ಪರಿವರ್ತಿಸಿದ್ದವು. ಗ್ರಾಮ ಸಮುದಾಯಗಳು ಮಾನವನ ಮನಸ್ಸನ್ನು ಸಾಧ್ಯವಾದಷ್ಟು ಸಣ್ಣ ಆವರಣದೊಳಗೆ ಹುದುಗಿಸಿ ಇರಿಸಿದ್ದವು. ಅದು ಪ್ರತಿಶೋಧವಿಲ್ಲದೆಯೆ ಮೂಢ ನಂಬಿಕೆಗಳಿಗೆ ಈಡಾಗುವಂತೆ ಮಾಡಿದ್ದವು.....''... ಮಾರ್ಕ್ಸ್ : ಪ್ರಥಮ ಭಾರತೀಯ ಸ್ವಾತಂತ್ರ್ಯ ಸಂಗ್ರಾಮ 1857-1959 ಪುಟ 24) ಶೋಷಿತ ಹೆಣ್ಣಿನ ಅಸಹಾಯಕತೆಯ ಅತ್ಯಂತ ನೈಜ ವರ್ಣನೆಯಲ್ಲವೆ ? ಮತ್ತೆ ಹೇಳಿದಂತೆ ಭಾಗೀರತಿ 'ಹೀಗಾಗಿ' "ಸರ್ರನೆ ಹೋದಾಳು ಬರ್ರನೆ ಬಂದಳು."

ಗಂಡನ ಮನೆಯಲ್ಲಿ ಭಾಗೀರತಿ ಹಾಕುವ ಕಣ್ಣೀರಿಗೆ ಬ್ಯಾಳಹಕ್ಕಿಗಳಲ್ಲಿಯ ಹಳ್ಳ ಕಣ್ಣಾಗ ಬಿದ್ದ ನೆಪ ಒದಗುತ್ತದೆ. ಸುಳ್ಳು ಹೇಳಿ ದುಃಖ ಮುಚ್ಚಿಕೊಳ್ಳುವಲ್ಲಿ (ಬಲಿ ಪವಿತ್ರಕಾರ್ಯವಾಗಿದ್ದರಿಂದ ಅಳಬಾರದು.) ಆಕೆಯ ಅಸಹಾಯಕತೆಯ ಭೂಮ,

ಪರಂಪರೆ ಶೋಷಿಸುತ್ತ ಬಂದ ಹೆಣ್ಣಿನ ಚಿತ್ರವನ್ನು ಇಷ್ಟು ಭವ್ಯವಾಗಿ ಕೊಟ್ಟ ಕಲೆ ಅದ್ಭುತ. ಸಾವನ್ನು ಸಂಭ್ರಮವಾಗಿ ಕಂಡ ಆ ಸಮಾಜಕ್ಕೆ ಈ ಅಳು ಅಭಾಸವಾಗಿ ಕಾಣದೇ ಇನ್ನೇನು ?

ದುಃಖ. ದುರಂತದಲ್ಲಿ ಮುಳುಗಿರುವ ಇಡೀ ಕಾವ್ಯ ಪರಂಪರೆಯನ್ನು ಮೂಲ ಭೂತವಾಗಿ ಕೆಣಕುತ್ತಲೇ ಹೊರಟಿದೆ. ಪರಂಪರಿತ ಮೌಲ್ಯವನ್ನು ದುರಂತದ ಛಾಯೆಯಲ್ಲಿಟ್ಟು ನೈಜವಾಗಿ ಮಾನವೀಯ ಶಾಶ್ವತ ಮೌಲ್ಯಗಳಿಂದ ಒರೆಗಿಡುತ್ತ ಹೋಗುವ ಅದ್ಭುತ ಕಲೆ ಈ ಕಾವ್ಯದಲ್ಲಿರುವುದರಿಂದ ಗಿರಡ್ಡಿಯವರ ವಾದವೆಲ್ಲ ಹುರುಳಿಲ್ಲದ್ದಾಗಿದೆ.

ಅಕ್ಕಿ, ಬೇಳೆಯನ್ನು ಹಸನು ಮಾಡುವ ಭಾಗಿರತಿ ಸುರಿಸುವ ಕಣ್ಣೀರು ಪ್ರಸಂಗದ ತಕ್ಷಣವೇ "ಉಕ್ಕುವ ನೀರಾಗ ಅಕ್ಕಿಯ ಸುರಿವ್ಯಾರು" ಎಂದು ಹಾಡು ಹೇಳುತ್ತದೆ. "ಉಕ್ಕ್ಯಾವ ಕಣ್ಣೀರು" ಎಂಬ ಮಾತಿಗೂ 'ಉಕ್ಕುವ ನೀರು' ಎಂಬು ದಕ್ಕೂ ಹೋಲಿಸಬೇಕು. ಸಕ್ಕರಿ, ಹಾಲಾಗ, ಶ್ಯಾವಿಗಿ ಸುರುವುವ ಸಂಗತಿ ನಂತರ ಹತ್ತು ಕೊಪ್ಪರಿಕೆ ನೀರು ಉಕ್ಕಿ ಮಳ್ಳುತ್ತಿರುವ ಚಿತ್ರವನ್ನು ಕವಿ ಕೊಡುವನು. ನಂತರ ಜಳಕದ ಪ್ರಶ್ನೆ ಬರುವುದು. ಯಾವ ಸೊಸೆಯೂ ಒಲ್ಲದ ಸ್ನಾನ ಭಾಗಿರತಿಯ ಪಾಲಿಗೆ ಅವಶ್ಯ, ಅನಿವಾರ್ಯ ಆಗುವುದು ! ಬಲಿಯಾಗಬೇಕಾದ 'ಕಣ್ಣೀರು ಹೆಣ್ಣಿಗೆ' ಮಾತ್ರ ಸ್ನಾನವಾಗುವುದು. ಕೆರೆಗೆ ಹೋಗುವಾಗ ಭಾಗಿರತಿ ಮುಖಂಡಳಾಗುವಳು. ಅವಳ ಹಿಂದೆ ಉಳಿದವರು, ಗಂಗೆ ಪೂಜೆಗೆ ಹೋರಡುವರು. ಬಂಗಾರ ಬುಟ್ಟಿ, ಬಟ್ಟಲುಗಳೂ ಅದ್ಭುತ ಸಂಕೇತ ಮತ್ತು ಜನಪದ ಆಶಯಗಳು. ಬಂಗಾರ ಬಟ್ಟಲ ಮರೆತು ಬರುವುದು, ಭಾಗೀರತಿ ಅದನ್ನು ತರಹೋಗುವುದು. ಮೆಟ್ಟಲೇರಿದಂತೆ ನೀರೇರು ವುದು, ಬಲಿಯಾಗುವ ಕ್ರಿಯೆಯನ್ನು ಕಲಾತ್ಮಕವಾಗಿಸುವ, ನಯಗೊಳಿಸಿಬಿಡುವ ಕವಿಕಲ್ಪನೆ.

ಬಂಡಾಯ ಪ್ರತಿಭಟನೆಗಳನ್ನು ವೈಯಕ್ತಿಕವೆಂದು ಮಾತ್ರ ಗಿರಡ್ಡಿ ಭಾವಿಸಿದ್ದಾರೆ. ವೈಯಕ್ತಿಕ ಮೌಲ್ಯಗಳ ಕಲ್ಪನೆಯೆ ಅಸಂಬದ್ಧ. 'ವ್ಯಕ್ತಿಗಳ ಬದುಕಿನ ಹಕ್ಕಿಗೆ ಸಾಮಾಜಿಕ ಮೌಲ್ಯಗಳು ಅಡ್ಡಿಯಾದಾಗ ಪ್ರತಿ ಭಟನೆಯ ಧ್ವನಿಗಳು ಕೇಳಿಬರುವುದು.' (83 ಪು). ಪ್ರತಿಭಟನೆ, ಬಂಡಾಯಗಳನ್ನು ತಪ್ಪಾಗಿ ಬರೇ ವೈಯಕ್ತಿಕ ಮೌಲ್ಯದಲ್ಲೇ ಸೀಮಿತಗೊಳಿಸಿ, ನೋಡುವ ಮೇಲ್ವರ್ಗದ ದೃಷ್ಟಿಕೊನದಿಂದ ಈ ತಪ್ಪು ತಿಳುವಳಿಕೆ ಬಂದಿದೆ. 'ಬಂಡಾಯದ ಪ್ರಶ್ನೆ ಬರುವುದು ಮೌಲ್ಯಗಳೆ ಅರ್ಥಹೀನವೆಂದು, ಅಸಂ ಪೂರ್ಣವೆಂದು ತೋರಿದಾಗ ಅಥವಾ ಮೌಲ್ಯಗಳಿಗೆ ವಿರುದ್ಧವಾಗಿ ನಡೆದು ಅನ್ಯಾಯ ಸಂಭವಿಸಿದಾಗ' ಎನ್ನುವ ಗಿರಡ್ಡಿಯವರು ಬಂಡಾಯದ ಸರಿಯಾದ ಅರ್ಥ ಗ್ರಹಿಸಿಲ್ಲ.

ಬಂಡಾಯ ಸಾಹಿತ್ಯ ಸಂಘಟನೆ ಮತ್ತು ಈಚಿನ ಚಾರಿತ್ರಿಕ ವಿಶಿಷ್ಟ ಸಾಮಾಜಿಕ ಆರ್ಥಿಕ ರಾಜಕೀಯ ಬೆಳವಣಿಗೆಗಳಿಂದಾಗಿ ಬಂಡಾಯ ಪದದ ಅರ್ಥ ಸ್ಪಷ್ಟಗೊಳ್ಳುತ್ತಿದೆ. ಉತ್ಪಾದಕ ಶಕ್ತಿಗಳ ಬೆಳವಣಿಗೆಗೆ ಹೊಂದದ ಉತ್ಪಾದನಾ ಸಂಬಂಧಗಳಲ್ಲಿ ಉಂಟಾಗುವ ಸಂಘರ್ಷವನ್ನು 'ಬಂಡಾಯ' ವೆನ್ನುವರು. ವರ್ಗಗಳ ನಡುವಿನ ನಿರಂತರ ವೈರುಧ್ಯ ವನ್ನು ಯಾವುದೇ ವರ್ಗ ಸಮಾಜದ ಯಾವುದೇ ಕಾಲದ ಸಾಹಿತ್ಯ ಕೃತಿಗಳು ಗುರುತಿ ಸುತ್ತ, ವಿವರಿಸುತ್ತ ಬಂದಿವೆ. ವರ್ಗಗಳಿರುವ ಸಮಾಜದಲ್ಲಿ ಯಾವಾಗಲೂ ಬಂಡಾಯ ವಿರುವಂಥದೇ. ಅದರ ರೂಪಗಳು ಅನೇಕ ಇರಬಹುದು. ಪ್ರತಿಷ್ಠಿತರ ಶೋಷಕ ಮೌಲ್ಯಗಳನ್ನು ಜನಪದರು ತಮ್ಮೆಲ್ಲ ಮಿತಿಗಳಲ್ಲಿ ಪ್ರತಿಭಟಿಸುತ್ತಲೆ ಬಂದಿದ್ದಾರೆ. ದುಡಿಯುವ ಜನವರ್ಗ ತನ್ನ ವರ್ಗ ಸ್ವಭಾವವನ್ನು ಕೆರೆಗೆ ಹಾರ ಪದ್ಯದಲ್ಲೂ ತೋರಿಸಿ ಕೊಂಡಿರುವುದು. ಕೆರೆಗೆ ಹಾರ ಪದ್ಯದ ಎಲ್ಲ ಪಾತ್ರಗಳು ಆ ಸಮಾಜದ ಪ್ರಜ್ಞೆಯನ್ನು ಪ್ರತಿನಿಧಿಸಿವೆ. ಅದು ಮಾದೇವ, ಗೌಡ, ಭಾಗೀರತಿಯರಂತೆ ಒಡ್ಡರ ಬೋಯಿಯ ಮಾವನದಾಗಿರಬಹುದು, (ಪುಟ. 93)

ಸಂಪ್ರದಾಯದ ವಿರುದ್ಧ ಬಂಡೆದ್ದ ಕವಿಯ ಅನುಕಂಪ ಓದುಗರಲ್ಲಿ ದುರಂತದ ದಟ್ಟ ಅನುಭವನ್ನು ಮುಟ್ಟಿಸುವಲ್ಲಿ ಶಾಂತವಾಗುತ್ತದೆ ಹೊರ್ತು 'ಬಲಿ'ಯನ್ನು ಸಮರ್ಥಿಸುವಲ್ಲಿ ಅಲ್ಲ. ಸಂಪ್ರದಾಯವನ್ನು ದುರಂತದ ಮೂಲಕ ಪ್ರಶ್ನಿಸುವ 'ಬಂಡಾಯ ದನಿ'ಯನ್ನು ಕಾವ್ಯದಲ್ಲಿ ನೋಡುತ್ತೇವೆ. ಅಂತೆಯೆ ಸಾಂಪ್ರದಾಯಿಕ ಮೌಲ್ಯಕ್ಕೆ ಒತ್ತು ಕೊಡದೇ ಶಾಶ್ವತವಾಗಿ ನಿಲ್ಲುವ ಮಾನವೀಯ ಮೌಲ್ಯವಾದ (ಜನಪದ ಕಾವ್ಯ ದಲ್ಲಿ ಇಂಥ ಮೌಲ್ಯಗಳ ಸಮೃದ್ಧಿ ಇದೆ) ಪ್ರೇಮ ಮಾನವೀಯ ಅನುಕಂಪಕ್ಕೆ ಒತ್ತು ಕೊಡಲಾಗಿದೆ. ಗಿರಡ್ಡಿಯವರು ಭಾವಿಸುವ ಮೌಲ್ಯಕ್ಕೆ ಒತ್ತುಕೊಡುವುದೇ ಉದ್ದೇಶ ವಾಗಿದ್ದರೆ ದುರಂತವನ್ನೇ ವರ್ಣಿಸುವ ಕೆಲಸ ಕವಿ ಮಾಡುತ್ತಿರಲಿಲ್ಲ. ಶೋಷಕ ಪರಂಪರೆ ಹಾಕಿದ ಮೂಢನಂಬಿಕೆಗಳ ಧಾರ್ಮಿಕ ಕ್ರೂರ ಅಮಾನವೀಯ ಮೌಲ್ಯವನ್ನು ಕೆಣಕುತ್ತ ತನ್ನದೇ ಮಿತಿಯಲ್ಲಿ (ದುರಂತದ ಮೂಲಕ) ಕಾವ್ಯ ಪ್ರತಿಭಟಿಸಿದೆ.

ಮಾನವೀಯ ಪ್ರೀತಿ ಮುಖ್ಯವಾದುದರಿಂದಲೆ ಹೆಂಡತಿಯ ಸಾವಿನ 'ರೀತಿ' ಗಿಂತ, ತನ್ನ ಬಲಿಯನ್ನು ಕೊಟ್ಟು ಕೊಂಡು ಮಹದೇವ ಧಾರ್ಮಿಕ ಸಂಪ್ರದಾಯಿಕ ಮೌಲ್ಯಗಳನ್ನು ಕೆಣಕುತ್ತಾನೆ. ಯಾರೂ ಮೂಕರಾಗಿ ಬಿಡುವ ಈ ಸನ್ನಿವೇಶಕ್ಕೆ ತಕ್ಷಣ ಕಾವ್ಯ ನಿಲ್ಲುತ್ತದೆ. ಈ ದುರಂತ ಓದುಗರಲ್ಲಿ ಹತ್ತಾರು ಪ್ರಶ್ನೆಗಳನ್ನು ಮೂಡಿಸುವುದರ ಮೂಲಕ, ಅನೇಕ ಮಗ್ಗಲುಗಳಿಂದ ತನ್ನನ್ನು ಪರೀಕ್ಷೆಗೆ ಒಳಪಡಿಸಿ ಕೊಳ್ಳುವ ಮೂಲಕ ಕಾವ್ಯ ಶ್ರೇಷ್ಠವಾಗಿದೆ. ನಿರ್ವಿಕಾರವಾಗಿ, ವಸ್ತುನಿಷ್ಟವಾಗಿ ನೈಜವಾಗಿ ನಿರೂಪಿಸುವುದರಿಂದ (ಆದರೆ ನೀರು ಬರುವ 'ಆಶಯ' ಇಡೀ ಕಾವ್ಯಕ್ಕೆ ಪ್ರತಿಗಾಮಿ ಅಂಶ, ಆದರೆ ಆಗದವರಿಗೆ ಅನಿವಾರ್ಯ ಮುಖ್ಯ ಅಂಶ) ಕಲೆಯ ಉತ್ಕೃಷ್ಟತೆ

ಯನ್ನು ಜನಪದ ಕವಿ ಮೆರೆದಿದ್ದಾನೆ. ಗಿರಡ್ಡಿಯವರು ಹೇಳುವಂತೆ ಈ ಕವಿ "ಮುಗ್ಧ, ಸರಳ ಮನೋಭಾವ"ದವನಲ್ಲ.

ದಂಡಿನ ಶೂರನಾದ ಮಹದೇವನನ್ನು ಇಡೀ ವ್ಯವಸ್ಥೆಯೆ ಬಲಿ ತೆಗೆದುಕೊಳ್ಳುತ್ತದೆ. ಪರಂಪರೆ ಕೇಳಿದ ಒಂದು ಬಲಿಗೆ ಬದಲಿ ಎರಡು ಬಲಿಗಳಾಗುತ್ತದೆ. ಇದೂ ದೇವನ ಆತ್ಮಹತ್ಯೆ. ಇಡೀ ಶೋಷಕ ಮೌಲ್ಯಕ್ಕೇನೆ ಪ್ರಶ್ನೆ ಕೇಳುತ್ತದೆ. ಈ ಕ್ರೂರ ವ್ಯಂಗ್ಯ ಸಂಪ್ರದಾಯಿಕ ಮೌಲ್ಯಗಳನ್ನೆ ಅಣಕಿಸುತ್ತದೆ.

ಅಂತೆ ಈ ಕಾವ್ಯಕ್ಕಿರುವ ಆಯಾಮ

೧. ಪರಂಪರಿತ ಮೌಲ್ಯಗಳನ್ನು ಅನಿವಾರ್ಯ, ಅಗತ್ಯ, ಶ್ರೇಷ್ಟವೆಂದು ಒಪ್ಪಿಕೊಂಡ ಶೋಷಕ ಗೌಡ, ಜೋಯಿಸ, ಭಾಗೀರತಿಯ ಅಪ್ಪ, ಅಮ್ಮ, ಅಕ್ಕ, ಗೆಳತಿಯರು.

೨. ಈ ಮೌಲ್ಯಗಳನ್ನು ತಮ್ಮ ಸಾವುಗಳ ಮೂಲಕ ಕೆಣಕಿ, ಅನುಕಂಪದ ಒರೆಗಲ್ಲಿಗೆ ತಿಕ್ಕಿ, ವಿಷಾದದ ಅಂಚಿನಲ್ಲಿ ನಿಲ್ಲಿಸಿ ಪ್ರಶ್ನೆಯಾಗಿ ನಿಲ್ಲುವವರು ಮಾದೇವ ಭಾಗೀರತಿ.

ಇಲ್ಲಿಯ ದುರಂತ ಶ್ರೇಷ್ಠ. ದುರಂತ ಕಾವ್ಯಗಳಲ್ಲಿರುವ ಎಲ್ಲ ಮಗ್ಗುಲನ್ನು ತೀರ ಸಂಕ್ಷಿಪ್ತವಾಗಿ, ಅರ್ಥಗರ್ಭಿತವಾಗಿ, ಕಲಾತ್ಮಕವಾಗಿ ಒಳಗೊಂಡಿರುವಂಥದು.

ಕಥನ ಕವನದ ಎರಡನೆ ಇಡೀ ಭಾಗ ಭಾಗೀರತಿಯ ಅಸಹಾಯಕ ನೋವಿನಿಂದ ತುಂಬಿದೆ. ಮಾನವೀಯ ಅನುಕಂಪ, ಧಾರ್ಮಿಕ ಶೋಷಕ ಮೌಲ್ಯಕ್ಕೆ ಮುಖಾಮುಖಿಯಾಗಿ ನಿಲ್ಲುವ ಹಂತ ಇಲ್ಲಿಂದ ಶುರುವಾಗುತ್ತದೆ. ಮಾದೇವನಿಗೆ ಭಾಗೀರತಿಯ ಗೆಳತಿ, ಹೇಳುವ ಮಾತಿನಲ್ಲೂ "ನಿನಮಡದಿ ಭಾಗೀರತಿದು ಏನ ಹೇಳಲಿ ಸೂರಿ! ನಿಮ್ಮಪ್ಪ, ನಿಮ್ಮವ್ವ ಕೆರೆಗೆ ಹಾರ ಕೊಟರಂತ" ಕೆಣಕುವ ದಾಟಿಯಿದೆ. ಬಲಿಯ ಬಗ್ಗೆ ಆಕೆಯ ದುಃಖ 'ಸಾರಿ' ಎಂದು ಹೇಳುವಲ್ಲಿ ಕಾಣುತ್ತದೆ. ಸಮಾಜಕ್ಕೆ ತಂದೆ, ತಾಯಿಗಳಿಗೆ ಮಗ ಕೊಡುವ ಉತ್ತರ. ತನ್ನ 'ಬಲಿ' ಪ್ರತಿಭಟನೆ ವ್ಯಕ್ತವಾಗುವುದು. ಈ ಭವ್ಯ ವೀರಮರಣದ ಮೂಲಕ, ಗಂಡನಿಗೆ ಕೆಟ್ಟ ಕನಸು ಬೀಳುವುದೂ ಮುಖ್ಯ. ಕವಿ ಬಲಿಯನ್ನು ಒಪ್ಪಿಕೊಂಡಿದ್ದೇ ಆಗಿದ್ದರೆ "ಸಮಾಜೋದ್ಧಾರ" ಕೆಲಸದಿಂದ ಒಳ್ಳೇ ಕನಸೇ ಬೀಳಬೇಕಿತ್ತಲ್ಲ!

# ಕವನಮೂಡುವ ಹೊತ್ತು

ಪ್ರಕೃತಿದೇವಿ ಸೆರಗ ಹಾಸದ ಈ ಹೊತ್ತು
ಮಳೆಗಾಗಿ ಕಾತರಿಸಿ ಬಿರಿದೊಡಲ ಹೊತ್ತು
ರೋಮರಂಧ್ರಗಳಿಂದ ಕಣ್ಣೀರಿಲ್ಲದ ಕಾವು
ಕಾದು ಮುದುಡಿದ ಹೃದಯ-ಹೆಡೆಬಿರಿದ ಹಾವು
ಇಂತಹ ಈ ಹೊತ್ತು, ಅದೇನೇನೋ ಹೊತ್ತು
ಒಳಗೆಲ್ಲ ಬರಿ ನೋವು! ಕವನ ಮೂಡುತ್ತಿಲ್ಲ!

ಅಮ್ಮ ಕಲಿಸಿದ ಪಾಠ-ಕಲ್ಯಾಣಗುಣವನೆಲ್ಲ ಹೊತ್ತು
ಮಾತುಗಳ ಒಳಗಿಟ್ಟು ಹೊಸಮನೆಯ ಹೊಕ್ಕು
ಸುತ್ತೆಲ್ಲ ಮುತ್ತಿತ್ತು ಪುರೋಹಿತರ ಜಿಗುಟು-ಜರ್ಬು
ಮೂಡಿ ಮುಳುಗುವವರೆಗೂ ಎರಡು ಹೊತ್ತು!
ತಣ್ಣನೆಯ ದುಗುಡ ಒಳಗನೆಲ್ಲ ಕತ್ತರಿಸಿತ್ತು
ನರ್ಪದಪ್ಪುಗೆ ರಾತ್ರೆ ಹಿತವೆನಿಸದಾಗಿತ್ತು
ಪರೆಕಿತ್ತು ಹೊರಗೆಡೆವ ಪರಿಕಾಣದಾಗಿತ್ತು
ಪರಿಪರಿಯ ಸಂಕೋಚಕ್ಕೆ ನಿದ್ದೆಯೆಲ್ಲವ ಕಿತ್ತು
ಹೊತ್ತು ಜಗದಗಲ ಹಿಗ್ಗಲಿಸಿ ನಿಂತಿರಲು
ಕವನ ಮೂಡುವುದಿಲ್ಲ! ಒಳಗೆಂತ ನೋವು!

ಸಂಕಟದ ಹೊತ್ತಿನಲಿ ಹುಲ್ಲಿನೆಳೆ ಸಾಕು!
ಗಾಂಧಿಬುದ್ಧರ ಮಾತು ಸಹನೆಯಂಗಿಯ ತೊಟ್ಟು
ಕಾರ್ಲ್‌ಮಾರ್ಕ್ಸ್‌ನ ಕನಸು ಬಿಗಿದ ಮುಷ್ಟಿಯಲಿಟ್ಟು
ಎದೆಬಿರಿವ ಸೆಖೆಯಲ್ಲಿ ದಪ್ಪಚಾದರ ಹೊದ್ದು
ಕತ್ತಲೆಯ ಗುಡಾರಕ್ಕೆ ಬಣ್ಣ ಕನಸುಗಳ ನೋನುತ್ತ
ಕರ್ತವ್ಯ ಮುಗಿಸಿ ಮಲಗುವ ಗಂಡಿನೇಕತಾನಕ್ಕೆ
ನಡುವಿನಿಂಚಿನ ದೂರ ಏಳು ಸಮುದ್ರ ಬೆಳೆದು
ತುಡಿವ ದೇಹದ ಕಾವು ಸಿಡಿಲಾಗಿ ಸಿಡಿದು
ಕವನ ಮೂಡಲೇ ಇಲ್ಲ! ಒಳಗೆಂತ ನೋವು!

ಗುಡುಗು ಸಿಡಿಲುಗಳಿತ್ತು
ತಂಪೆರೆವ ಹನಿಮಳೆಯಿಲ್ಲ!

---

ಎಸ್. ಮಾಲತಿ, 31, 3ನೇ ಕ್ರಾಸ್, ಗವಿಪುರಂ ಬಡಾವಣೆ, ಬೆಂಗಳೂರು-560019

ವನದ ತುಂಬೆಲ್ಲ ಬಲಿತ ಹುಳಿ ಹೂವುಗಳು
ಚಿಗುರೊಡೆವ ಉಗುರು ಬೆಚ್ಚಗಿನ ಹಿತಕಾಣಲಿಲ್ಲ !
ಕತ್ತಲೆಯು ಕೋಟೆಯದು, ಬಿಗಿದು ಹಿಡಿತ
ಹೊರದಾರಿ ಅಲ್ಲಿಲ್ಲ, ಬರಡಾದ ಕನಸೇ ಹಿತ !
ಕಪ್ಪು ಕಾಗದದಲ್ಲಿ ಕಪ್ಪು ಶಾಹಿಯ ಲಿಖಿತ
ಬರೆದ ಕೈ ಸವೆದರೂ ಕವನ ಮೂಡಲೇ ಇಲ್ಲ !

* * *

ಕಪ್ಪು ಕೋಟೆಯ ಬಿರಿದು ಬಿಳಿಕಿರಣ ನುಸುಳಿತ್ತು
ಕವಿದ ಕತ್ತಲಿನಾಚೆ ಕಣ್ಣೆರಡು ಹೊರಳಿತ್ತು !
ಹೊಳೆವ ಕಿರಣದ ಮೇಲೆ ಹತ್ತಿ ನಡೆದೆನು ದೂರ
ಕೊಸರಾಟದಾಚೆಗದೋ ಸ್ಪಷ್ಟತೆಗಳ ಪಾರ !
ಬಿರಿವ ನೋವದು ತಾನು ಅಳುವಾಗಿ ಹಗುರಾಯ್ತು
ಬಚ್ಚಿಟ್ಟ ಜೀವದನಿ ನಯದಲ್ಲಿ ನುಲಿದಿತ್ತು !

ಬಟಾಬಯಲಿಗೂ ಮೂಡಿತ್ತು ಹೊಳೆವ ಮಿಂಚಿನ ಅಂಚು
ಕರಿಮೋಡ ಸುರಿದಿತ್ತು ಪಿಸುಮಾತಿನಲಿ ತಂಪು !
ಬಿರುಕಿಟ್ಟ ಬರಿದೆದೆಯು ಪನ್ನೀರು ಕುಡಿದಿತ್ತು
ರೆಂಬೆ ರೆಂಬೆಗಳಲ್ಲಿ ಉಸಿರು ಸಂಚರಿಸಿತ್ತು !
ಬಾಯಾರಿದಾ ಜೀವ ನಿಃಶ್ಶಬ್ದದಲಿ ತಣಿದು
ಮಳೆಬಿದ್ದ ನೆಲದಿಂದ ಮಣ್ಣವಾಸನೆ ಹೊರಟು
ಪುಟಿದೆದ್ದ ಕಾವಿನಲಿ ಆಸೆಗಳ ನಾ ಹೊತ್ತು
ಅದೇ ಅದೇ ನನ್ನ ಕವನ ಮೂಡಿದ ಹೊತ್ತು !

ಕಪ್ಪುಕೋಟೆಯ ಕುವರ ! ಓ ನನ್ನ ಯಜಮಾನ !
ಗೊರಕೆ-ಜೊಲ್ಲಿಳಿಸುತ್ತ ಮಲಗಿರುವೆಯೇನು ?
ಬಿಳಿಕಿರಣದಲಿ ಕೂತು ಬಯಲಗಾಳಿಗೆ ಸೋತು
ನಾಜೂಕಿನಲಿ ಸುರಿವ ಮಳೆಯ ಹನಿ-ಹನಿ ಕುಡಿದು
ತಟ್ಟಂತ ಮೂಡಿದೆ ಕವನ ! ನಿನಗೆ ಕಿವಿ ಮಾತು !
"ಇದೇ....ಇದೇ....ನನ್ನ ಕವನ ಮೂಡುವ ಹೊತ್ತು !"

—ಎಸ್. ಮಾಲತಿ

## ಮೂಳೆ ಬೆಲೆ

ಲಗ್ನ ಎಂದರೆ ಹೊಂದಾಣಿಕೆ ಎಂದರೆ ವ್ಯವಹಾರ
ಅದ್ದಗಾಣಿಯು ಸೋಲ ಅದ್ದಗಾಣಿಯು ಗೆಲ್ಲ
ಶೇಷದ ಮಹದೇವ ಸೆಟ್ಟಿಯು ಲೆಕ್ಕಾಚಾರ
ಅಲ್ಲವೇ ಅಲ್ಲ! ಆಸೆ ಪರ್ವತಗಳ ಇಕ್ಕಿ
ತೂಗುವ ತುಳಸಿದಳ. ಕಳವಳ ಕಾಂಡಗಳ
ತುಂಬಿ ನೊರೆವ ತುಫಾನು. ತಂದೆ ಆಜ್ಞೆಗೆ
ತಾಯ ಶಿರಿತರಿವ ಪರಶು ಬಲ
ಉದ್ದಾಲಕ ಬುದ್ಧಿಯ ಶ್ರಾದ್ಧಫಲ
ಅವರಿವರ ಹೆಜ್ಜೆಗೆಜ್ಜೆಗಳು ಗುರಿ–
ಮುಟ್ಟಿಸುವ ನಯ ನಾಜೂಕು ನಂಬಿಕೆ ವಿಫಲ

ಬಿದ್ದ ಬೆಳಕಲ್ಲಿ ಎದ್ದ ಬೆಳೆಯು ಲೆಕ್ಕ ಇಟ್ಟು
ವರ್ತಮಾನಕ್ಕೆ ಗುದ್ದು ತೋಡುವ ಗೊಣಗು ಬುದ್ಧಿ
ನ್ಯಾಸಕ್ಕೆ ತೆರೆವಾದ ದಧೀಚಿಯು ಮೂಳೆಬೆಲೆ
ತನ್ನ ಶಿಲುಬೆಗೆ ತನ್ನ ಹೆಗಲೇ ಹಗಲು ಸತ್ಯ

— ಎಸ್.ಜಿ.ಸಿದ್ದರಾಮಯ್ಯ

---

ಎಸ್.ಜಿ ಸಿದ್ಧರಾಮಯ್ಯ. ಕನ್ನಡ ಅಧ್ಯಾಪಕ ಸರ್ಕಾರಿ ಕಲಾ ಕಾಲೇಜು ತುಮಕೂರು

## ನೀನು ಚೋನು ಅಲ್ಲ

ಹುಟ್ಟುವ ನೇಸರು
ಮುಗು ಹರಿವ ಸ್ವೈರನ್ನಾಗಿದ್ದುಂಟಾ ?
ಬಡವರ ಸಿಟ್ಟು
ಹಲ್ಲುದುರುವ ನಿಜ ಎಂಬನುಭವವಿದೆಯಾ ?
ಕೊಟ್ಟಿಗೆಯಲ್ಲಿ ಕೂತು ಎಸೆದ ರೊಟ್ಟಿ ತುಂಡುಗಳ ತಿಂದು
ಬ್ರಹ್ಮಾನಂದ ಪಟ್ಟು ಹಿಗ್ಗಿದ್ದು
ಎಷ್ಟು ದುಡಿದರೂ ಮುಗಿಯಲಾರದ ಜೀತವನ್ನು
ಹೇಡದ ಬುರುಡೆಯಲ್ಲಾದರೂ ಮುಳುಗಿಸುವ ಯತ್ನ ಮಾಡಿದ್ದು
ಅಕ್ಕ ತಂಗಿ ಕೊನೆಗೆ ನಿನ್ನ ಹೆಂಗಸನ್ನೇ

ಹಾಸಿಗೆ ಮಾಡಿಕೊಂಡಾಗಲೂ
ತುಟಿಕಚ್ಚಿ
ತನ್ನ ರಕ್ತ ತಾನೇ ಕುಡಿದು
ಕೂತದ್ದು ಉಂಟಾ ?
ಇಲ್ಲ ಬಿಡಣ್ಣ,
ನಮ್ಮ ಕಷ್ಟ ನಿನಗೆ ಗೊತ್ತಾಗಲ್ಲ
ಯಾಕೆಂದರೆ ನೀನು
ಚೋಮ ಅಲ್ಲ.

—ಜಿ.ಎಸ್. ಸಿದ್ಧಲಿಂಗಯ್ಯ

---

ಪ್ರೊ.ಜಿ.ಎಸ್. ಸಿದ್ಧಲಿಂಗಯ್ಯ, ಪ್ರಾಂಶುಪಾಲರು, ಆರ್.ಸಿ.ಕಾಲೇಜ್, ಪ್ಯಾಲೇಸ್ ರಸ್ತೆ
ಬೆಂಗಳೂರು-560 001

## ನಿರೀಕ್ಷೆ

ಮರ ಒಣಗಿ ನಿಂತಿದೆ
ಆಸೆಯ ಎಲೆಗಳೆಲ್ಲ ಉದುರಿದೆ
ಆಸರೆ ಭೂಮಿಯದೊಂದೆ
ನೀರಿಗಾಗಿ ಕಾದಿದೆ
ಸೊರಗಿ ಸಣಕಲಾಗಿ ನಿಂತಿದೆ.

ಹಾರುವ ಹಕ್ಕಿಗಳಿಗೆ ತಾಣವಲ್ಲ
[illegible]ಗಳಿಗೆ ಮೋವಲ್ಲ
ಅಸ್ತಿತ್ವ ಇದೆ ಅಷ್ಟೆ ಭುವಿಯ ಮೇಲೆ
ಬಿಸಿಲಿಗೆ ಬಡಕಲಾಗಿ
ಬಡಪಾಯಿಯಾಗಿ ನಿಂತಿದೆ.

ಪ್ರೀತಿಯ ಮಳೆಗರೆದರೆ
ಮತ್ತೆ ಚಿಗುರಬಹುದೇನೋ
ಹಸಿರಾಗಬಹುದೇನೋ
ಎಂಬ ನಿರೀಕ್ಷೆಯಲಿ ನಿಂತಿದೆ

—ಕೆ.ಸಿ.ಮಮತ

---

ಕೆ.ಸಿ.ಮಮತ, 20.ಎಚ್.ಬಿ.ಕಾಲೋನಿ, ಎಚ್.ಎಸ್.ಬಡಾವಣೆ, ಹರಿಹರ (ಚಿತ್ರದುರ್ಗ ಜಿಲ್ಲೆ).

# ಸಾವು ಮತ್ತು ಮರು ಹುಟ್ಟು

—ಬಿದಿರಹಳ್ಳಿ ನರಸಿಂಹಮೂರ್ತಿ

## ಸಾವು ಎಂದರೆ

ಸಾವು ಎಂದರೆ ಸಾಕು. ನಮ್ಮ ಕಣ್ಣರಳುತ್ತವೆ. ಕಿವಿ ಚುರುಕಾಗುತ್ತವೆ. ಎದೆ ಬಡಿತ ಜೋರಾಗುತ್ತದೆ. ಎಲ್ಲಿ ಯಾಕೆ ಹೇಗೆ ಸಾವು ಅವತರಿಸಿತು ಎಂದು ವಿಚಾರಿಸುತ್ತೇವೆ. ಸತ್ತವರ ಕಂಡು ಭೀತರಾಗಿ ತುಟಿಗಳಿಂದ ಅನುಕಂಪ ಸುರಿಸುತ್ತೇವೆ. ಆ ನೆವದಲ್ಲಿ ಬದುಕಿಗೆ ಇನ್ನಷ್ಟು ಗಟ್ಟಿಯಾಗಿ ಅಂಟಿಕೊಳ್ಳುತ್ತೇವೆ. ಸಾವಿನ ನಂತರ ನಾವೇನಾಗುತ್ತೇವೊ ಎಂದು ಯೋಚಿಸಿ ದಣಿಯುವುದೂ ಉಂಟು. ಸಾವು ಮಾತ್ರ ಇದ್ಯಾವುದಕ್ಕು ಸೊಪ್ಪು ಹಾಕದೆ ಮಿಣ್ಣಗೆ ಬಂದು ತಣ್ಣಗೆ ಹೋಗಿಬಿಡುತ್ತದೆ.

ಮನುಷ್ಯನ ಹುಟ್ಟಿನ ಬಗ್ಗೆ ಧರ್ಮಗಳು ಸೊಗಸಾದ ಕಲ್ಪನೆಗಳನ್ನ ಕೊಡುತ್ತ ಬಂದಿದ್ದಾವೆ, ಆದರೆ ನಿಜವಾದ ಅರ್ಥದಲ್ಲಿ ಹುಟ್ಟಿನ ಗುಟ್ಟು ಒಡೆದದ್ದು ಆಧುನಿಕ ವಿಜ್ಞಾನ, ಹುಟ್ಟಿನ ಬಗ್ಗೆ ನೂರಾರು ಬಗೆಯ ಸಂಶೋಧನೆಗಳಾಗಿವೆ. ಅದು ಈಗ ವೈಜ್ಞಾನಿಕ ವ್ಯಾಖ್ಯೆಗೆ ಸಿಗುತ್ತದೆ. ನಮ್ಮ ತಿಳುವಳಿಕೆಯಲ್ಲಿ ಹುಟ್ಟಿನ ಬಗ್ಗೆ ಸಾಕಷ್ಟು ಸ್ಪಷ್ಟವಾದ ಚಿತ್ರವಿದೆ. ಹುಟ್ಟಿನ ನಂತರದ ಮನುಷ್ಯನ ಬದುಕು ಒಂದು ರೀತಿಯಲ್ಲಿ ತೆರೆದಬಾಗಿಲು ಮತ್ತೊಂದು ರೀತಿಯಲ್ಲಿ ಮುಚ್ಚಿದ ಬಾಗಿಲು, ದಿನದಿನ ನಮಗಾಗುವ ಲಕ್ಷಾವಧಿ ವಿನ್ಯಾಸದ ಪ್ರತ್ಯಕ್ಷ ಅನುಭವಗಳಿಂದಾಗಿ ಬದುಕು ನಮಗೆ ಅರ್ಥವಾಗಿದೆ ಎಂದುಕೊಳ್ಳುತ್ತೇವೆ. ಆದರೆ ಬದುಕನ್ನ ಅರ್ಥಮಾಡಿಕೊಂಡಷ್ಟೂ ಇನ್ನೂ ಎಷ್ಟೊಂದು ಸಂಗತಿಗಳು ನಮಗೆ ಅರ್ಥವಾಗಿಲ್ಲವಲ್ಲ ಎಂಬ ಅರಿವು ಮೂಡುತ್ತ ಹೋಗುತ್ತದೆ. ಹುಟ್ಟು–ಬದುಕು–ಸಾವುಗಳಲ್ಲಿ ಅತ್ಯಂತ ನಿಗೂಢವಾದದ್ದು ಸಾವು. ಸಾಮಾನ್ಯರನ್ನ ಬೆಚ್ಚಿ ಬೀಳಿಸುತ್ತ ಚಿಂತನಶೀಲರ ತಲೆತಿನ್ನುತ್ತ ಇಲ್ಲಿ ಅಲ್ಲಿ ಎಲ್ಲೆಲ್ಲು ಕುಣಿಯೋಣು ಬಾ ಹಾಡುತ್ತ ಮಿಂಚಿ ಮಾಯವಾಗಿಬಿಡುತ್ತದೆ ಸರ್ವಶಕ್ತ ಸರ್ವವ್ಯಾಪಿ ಸಾವು.

ಸಾವು - ಹಾಗಂದರೇನು ? ಏನೆಂದು ಇನ್ನೂ ಯಾರಿಗೂ ಗೊತ್ತಾಗಿಲ್ಲ. ಸತ್ತವರ್‍ಯಾರೂ ನಮ್ಮ ಉರಿಯುವ ಪ್ರಶ್ನೆಗೆ ಉತ್ತರಮುಖಿಗಳಾಗದೆ ಬೆನ್ನು ತಿರುಗಿಸಿ ಕೂತು

ಬಿದಿರಹಳ್ಳಿ ನರಸಿಂಹಮೂರ್ತಿ, ಪ್ರವಾಸಿಮಂದಿರದ ಪಕ್ಕ, ಶಿವಮೊಗ್ಗ

ಬಿಡುವುದರಿಂದ ಸಾಯುವ ಅನುಭವ ಹೇಗಿರುತ್ತದೆಂಬುದು ಅಸ್ಪಷ್ಟವಾಗೆ ಉಳಿದಿದೆ. ಸತ್ತವರು ಬದುಕಿರುವವರ ಮೈಮೇಲೆ ಬಂದು ತಾವು ಯಾಕೆ ಯಾವಾಗ ಎಲ್ಲ ಸತ್ತೆ ವೆಂದು ಹೇಳುವರೆಂಬ ನಂಬಿಕೆ ಎಷ್ಟೋ ಸಂಸ್ಕೃತಿಗಳಲ್ಲಿ ಜಾರಿಯಲ್ಲಿದೆ. ಆದರೆ ಅಂಥ ಸತ್ತವರ ನೆರಳುಗಳು ಸಾಯುವ ಸಂಕಟದ ಬಗ್ಗೆಯಾಗಲಿ ಏನನ್ನೂ ಹೇಳುವುದಿಲ್ಲ ವೆಂಬುದು ಗಮನಾರ್ಹ. ಕವಿ ಕಲಾವಿದರು ಸಾವು ಹೀಗಿರಬಹುದು ಹಾಗಿರಬಹು ದೆಂಬ ಊಹೆಯ ಗುಳ್ಳೆ ಊದುತ್ತಲೆ ಬಂದಿದ್ದಾರೆ. ಟಾಲ್‌ಸ್ಟಾಯ್‌ನ ಕತೆ 'ಐವ್ಯಾನ್ ಇಲ್ಯಿಚ್‌ನ ಸಾವು'ನಲ್ಲಿ ಸಣ್ಣಕಾರಣಕ್ಕಾಗಿ ಹಾಸಿಗೆ ಹಿಡಿದವನೊಬ್ಬ ದಿನೆ ದಿನೆ ಒಳಗೊಳಗೆ ಸಾಯುತ್ತ ಹೋಗಿ ಕಡೆಗೊಂದು ದಿನ ಗೋಣಿಚೀಲದ ಕತ್ತಲಲ್ಲಿ ಉಸಿರುಗಟ್ಟಿಸುವಂತೆ ತುಂಬಿಟ್ಟ ಅನುಭವವಾಗಿ, ಸುತ್ತ ನಿಂತವರ ಮಾತು ನಿದಾನ ಕೇಳಿಸದಂತಾಗಿ, ತಾನು ಹೇಳಬೇಕಿದ್ದ ಕೊನೆ ಮಾತನ್ನ ಹೇಳಲು ಬಾಯಿಗೆ ಆಗುತ್ತಲೆ ಇಲ್ಲವಲ್ಲ ಎಂದುಕೊಳ್ಳುತ್ತ ಸತ್ತು ಹೋಗುತ್ತಾನೆ. ಸಾವಿನ ಸಮೀಪ ಹೇಗಿದೆ ಎನ್ನ ಬಹುದಾದ ಒಂದು ಊಹೆ ಇದು. ಎಮಿಲಿ ಡಿಕಿನ್ಸನ್ ಮತ್ತೊಂದು ಬಗೆಯಲ್ಲಿ ಸಾವನ್ನೆ ಕವನ ಮಾಡುತ್ತಾಳೆ. ಮೀರಾಗೆ ಕೃಷ್ಣ ಇದ್ದ ಹಾಗೆ ಅಕ್ಕಗೆ ಚೆನ್ನಮಲ್ಲಿ ಕಾರ್ಜುನ ಇದ್ದ ಹಾಗೆ ಅವಳಿಗೆ ಸಾವೆ ಜೀವಸುಖ. ಸಾವನ್ನೆ ವ್ಯಕ್ತಿಮಾಡಿ ಆತನ ಸಭ್ಯತೆ, ಸೌಜನ್ಯ, ರಾಜಗಾಂಭೀರ್ಯ ಕಣ್ಣಿಗೆ ಕಟ್ಟುವಹಾಗೆ ಕವನಿಸಿದ್ದಾಳೆ, ಎಮಿಲಿ. ಅವಳದು ಮತ್ತೊಂದು ಊಹೆ,

ಸಾವಿನ ಬಗ್ಗೆ ಜಿಜ್ಞಾಸೆಗೆ ಕೂತರೆ ಊಹೆಗಳ ಮೇಲೆಯೆ ಉಯ್ಯಾಲೆಯಾಡ ಬೇಕಾಗುತ್ತದೆ. ಸರಳ ಮನಸ್ಸಿನ ಜನಪದರು ನಂಬುವಂತೆ ಸಾಕೆನಿಸಿ ಶಿವ ಕರೆದಾಗ ಮನುಷ್ಯನ ಪ್ರಾಣಪಕ್ಷಿ ಅವನೆಡೆಗೆ ಹಾರಿಹೋಗುತ್ತದೊ ? ವೇದಾಂತಿಗಳು ತರ್ಕಿಸು ವಂತೆ ಕರ್ಮಸಾಧನೆ ಮುಗಿದ ಕ್ಷಣದಲ್ಲಿ ಜೀವಾತ್ಮ ದೇಹಬಿಟ್ಟು ಪರಮಾತ್ಮನನ್ನ ಸೇರುತ್ತದೊ ? ಭೌತವಾದಿಗಳು ಸಾಧಿಸುವಂತೆ ಮೈಮನಸ್ಸುಗಳು ತಡೆಯಲಾಗದ ಆಘಾತಕ್ಕೊಳಗಾದಾಗ ದೇಹದಲ್ಲಿರುವ ಚೈತನ್ಯ ಮಾಯವಾಗಿ ಪಂಚಭೂತಗಳಲ್ಲಿ ಲೀನವಾಗುತ್ತದೊ ? ವಿಜ್ಞಾನ ವಿವರಿಸುವಂತೆ "ದೇಹದ ಅಂಗಗಳು ತಮ್ಮ ಕೆಲಸ ನಿಲ್ಲಿಸುವಂಥ, ರಕ್ತ ಸಂಚಾರ ನಿಂತು ಮಿದುಳು ಜಡವಾಗಿ ಶರೀರದ ವ್ಯಾಪಾರಗಳು ಕೊನೆಗೊಳ್ಳುವ ಸ್ಥಿತಿಯೆ" ಸಾವೊ ? ಯಾವುದು ಹೌದು ಯಾವುದು ಅಲ್ಲ ? ಜೀವಂತ ವಾಗಿರುತ್ತ ಲವಲವಿಕೆಯಿಂದ ಕೂಡಿ ಚಟುವಟಿಕೆಯಲ್ಲಿ ತೊಡಗಿರುವ ಸಜೀವ ವಸ್ತು ಇದ್ದಕ್ಕಿದ್ದಂತೆ ತನ್ನೆಲ್ಲ ಜೀವಂತಿಕೆ, ಲವಲವಿಕೆ, ಚಟುವಟಿಕೆಗಳನ್ನ ಕಳೆದುಕೊಂಡು ನಿಶ್ಚಲವಾಗಿ ನಿರ್ಜೀವವಾಗಿ ಕೂಡುವುದು ಹೇಗೆ ಸಾಧ್ಯವಾಗುತ್ತಿದೆ. ಇದು ಇನ್ನೂ ಬಿಡಿಸಬೇಕಾದ ಒಗಟು. ಧರ್ಮದ ಇದಮಿತ್ಥಂ ಪ್ರತಿಪಾದನೆಯನ್ನೂ ವಿಜ್ಞಾನದ ಹುಶಾರಾದ ಪರೀಕ್ಷಣವನ್ನೂ ಮೀರಿ ಸಾಮಾನ್ಯ ತಿಳುವಳಿಕೆಗೆ ಸಾವನ್ನು ಒಗ್ಗಿಸಿಕೊಳ್ಳು

ವುದು ಹೇಗೆ ? ಎಲ್ಲದಕ್ಕು ಒಂದು ಕೊನೆ ಇದೆಯಲ್ಲ, ಇದ್ದದ್ದು ಇಲ್ಲವಾಗುವ ಕ್ಷಣವಿದೆಯುಲ್ಲ ಅದೆ ಸಾವೆ ?

ಹುಟ್ಟಿನಿಂದಲೆ ಸಾವನ್ನು ಕಟ್ಟಿಕೊಂಡೆ ಬರುವ ಮನುಷ್ಯ ದಿನ ದಿನ ಅಳೆಯುತ್ತ ಅಂಗುಲಹುಳುವಿನಂತೆ ಸಾಗಿ ಸಾವಿನಗೂಡು ಸೇರುತ್ತಾನೆ. ಅಥವ ಸಾವೆಂಬ ಕಗ್ಗತ್ತಲ ಗುಹೆ ಬಾಯಿ ತೆರೆದುಕೊಂಡು ಅಂಗುಲಂಗುಲ ಕ್ಷಣ ಕ್ಷಣ ಹತ್ತಿರವಾಗುತ್ತ ಬಂದು ಕಡೆಗೊಂದು ದಿನ ಇವನನ್ನ ನುಂಗಿ ಕೂಡುತ್ತದೆ. ಹೀಗಿರುವುದರಿಂದಲೆ ಬದುಕಿನ ಒಂದೊಂದು ಕ್ಷಣವೂ ಅತ್ಯಮೂಲ್ಯ ಎನಿಸುವುದು. ಸಾವೆಂಬುದೆ ಇಲ್ಲದಿದ್ದರೆ ಬದುಕೊಂದು ಮುಗಿಯಲಾರದ ಸಂತೆಯಾಗಿ ಮನುಷ್ಯನಿಗೆ ಹುಚ್ಚು ಹಿಡಿಯುತ್ತಿತ್ತೇನೊ. ಸಾವೆಂಬ ಪೂರ್ಣ ವಿರಾಮ ಇರುವುದರಿಂದಲೆ ಬದುಕೆಂಬ ವಾಕ್ಯಕ್ಕೊಂದು ಅರ್ಥ ಅಲ್ಲವೆ ?

## ಸಾವಿಗೆ ಎಷ್ಟೊಂದು ಮುಖಗಳು

ಹಚ್ಚಗಿನ ಎಳೆ ತೆಂಗಿನ ಗರಿ ಹಸುವಿನ ಬಾಯಿಗೆ ಆಹಾರವಾಗುತ್ತದೆ. ಘಮ ಘಮಿಸುವ ಸಂಪಿಗೆ ನೆಲಕಂಡು ಒಣಗಿ ಕಸವಾಗುತ್ತದೆ. ದೈತ್ಯ ಮರ ಬಿರುಗಾಳಿಗೆ ಬಿದ್ದು ಸಾಯುತ್ತದೆ. ಪುಟ್ಟಹಕ್ಕಿ ವಿದ್ಯುತ್ ತಗಲಿ ಸತ್ತು ಬೀಳುತ್ತದೆ. ಸರ ಸರ ಓಡುವ ಗೊದ್ದ ಹೆಂಟೆಗೊದ್ದನ ಹೊಟ್ಟೆ ಸೇರುತ್ತದೆ. ಕಂತ್ರಿನಾಯಿ ಲಾರಿಗೆ ಸಿಕ್ಕು ಕರುಳು ಚೆಲ್ಲಿ ರಸ್ತೆಗಂಟುತ್ತದೆ. ನೆಲೆತಪ್ಪಿದ ನಕ್ಷತ್ರ ಜಾರಿಬಿದ್ದು ಕರಗಿ ಇಲ್ಲವಾಗುತ್ತದೆ. ಎಲ್ಲ ಸಾವಿನ ಆವಿಷ್ಕಾರಗಳೆ. ಆದರೆ ಮರ ಹಕ್ಕಿ ಹೂವು ನಕ್ಷತ್ರ ಇವ್ಯಾವೂ, ಸಾವನ್ನು ಮನಸ್ಸಿನಿಂದ ಗ್ರಹಿಸುವುದಿಲ್ಲ. ವ್ಯಾಕುಲಗೊಳ್ಳುವುದಿಲ್ಲ, ಹಳತನ್ನೆಸೆದು ಹೊಸತನ್ನ ಅರಳಿಸುತ್ತ ಹೋಗುವ ನಿಸರ್ಗದ ಪ್ರಚಂಡ ಲಯಬದ್ಧತೆಗೆ ನಮ್ರವಾಗಿ ಒಪ್ಪಿಸಿಕೊಳ್ಳುತ್ತವೆ. ಅಥವ ನಿಸರ್ಗದಲ್ಲಿ ಅಂತರ್ಗತವಾಗಿದ್ದು, ಮಾನವ ನಾಗರಿಕತೆ ಯುದ್ಧಕ್ಕು ಅಗಲಗೊಳ್ಳುತ್ತಿರುವ ಪ್ರವಾಹ ರೂಪದಲ್ಲಿ ಹರಿದು ಬಂದಿರುವ ಆಕ್ರಮಣಕಾರಿ ಸ್ವಭಾವಕ್ಕೆ ಮೌನವಾಗಿ ಬಲಿಯಾಗುತ್ತವೆ. ಒಟ್ಟಿನಲ್ಲಿ ಮನುಷ್ಯೇತರ ವಸ್ತುಗಳೆಲ್ಲ ಮನುಷ್ಯನಿಗಿಂತ ಸುಲಭವಾಗಿ ಸಾವನ್ನ ಸ್ವೀಕರಿಸುತ್ತವೆ ಅಥವ ಮನುಷ್ಯ ಮನಸ್ಸಿಗೆ ಹಾಗೆ ಭಾಸವಾಗುತ್ತದೆ.

ಮನುಷ್ಯನನ್ನು ಸದಾ ಬಾಧಿಸುವುದು ಮನುಷ್ಯನ ಸಾವು ಮಾತ್ರ. ಅದರಲ್ಲು ಅವನ ಭೌತಿಕ ಸಾವು ಮಾತ್ರ. ಆದರೆ ಸಾವಿನ ಸಾಮ್ರಾಜ್ಯ ಅಲ್ಲಿಗಷ್ಟೆ ಸೀಮಿತವಲ್ಲ. ಪ್ರಾಣಿಲೋಕ ಪಕ್ಷಿಲೋಕ ಸಸ್ಯಲೋಕಗಳಲ್ಲು ಸಾವುತಾಂಡವವಾಡುವುದನ್ನ ನೋಡುತ್ತಲೆ ಇದ್ದೇವೆ. ಹಾಗೆಯೆ ಜಲಲೋಕ ವಾಯುಲೋಕ ಬೆಳಕಿನಲೋಕ ಆಕಾಶಲೋಕಗಳಿಗು

ಸಾವು ತಟ್ಟುವುದು ಅಸಂಭವವಲ್ಲ. ಬತ್ತಿ ಬರಿದಾದ ಬರಗಾಲದ ಕೆರೆ ನೀರಿನ ಸಾವನ್ನೆ ನೀರನ್ನೆ ನಂಬಿ ಬದುಕುವ ಜೀವಕೋಟಿಯು ಸಾವನ್ನ ಸಾರುತ್ತದೆ. ಬೇಸಿಗೆಯ ಧಗೆ ಹಗಲುಗಳಲ್ಲಿ ಒಮ್ಮೊಮ್ಮೆ ಗಾಳಿ ಸತ್ತಹೋದ ಅನುಭವವಾಗುತ್ತದೆ. ಮರಗಳು ಕಲ್ಲಾಗಿ ನಿಂತಿರುತ್ತವೆ. ಮಾಯವಾಗಿ ಹೋದ ವಾಯುದೇವನಿಗಾಗಿ ಹಂಬಲಿಸುತ್ತೇವೆ. ಒಂದು ದಿನ ಜಗತ್ತಿದಲ್ಲಿಡಿ ಆಮ್ಲಜನಕವೆ ಇಲ್ಲವಾಗಿಬಿಟ್ಟರೆ ಎಂದು ಯೋಚಿಸಿದರೆ ಈಗಲೆ ಉಸಿರುಗಟ್ಟಿದಂತಾಗುತ್ತದೆ. ಸೂರ್ಯ ಇವನೊಬ್ಬನೆ ಇವನ ಶಕ್ತಿಯನ್ನ ಮುಂದು ಮಾಡಿ ಖರ್ಚು ಮಾಡಬಿಟ್ಟರೆ ಮುಂದೆ ಬೆಳಕು ಶಾಖಗಳೆ ಸೊನ್ನೆ ಎಂದು ಹೆದರಿಸುತ್ತದೆ ವಿಜ್ಞಾನ. ಕಡಿನ ಹಸಿರ-ಲೋಕವನ್ನಂತು ಮನುಷ್ಯ ಮಿತಿಮೀರಿ ಹಾಳುಗೆಡವಿ ಪ್ರತೀಕಾರಕ್ಕೆ ಒಳಗಾಗಿದ್ದಾನೆ. ಹೀಗೆ ಇದ್ದದ್ದು ಇಲ್ಲವಾಗಿಬಿಡುವ ಅಥವ ಇಲ್ಲವಾಗಿಸಿದ ಶಕ್ತಿಯ ಮೇಲೆ ಸೇಡುತೀರಿಸಿಕೊಳ್ಳುವ ಸಾವಿನ ವಿಶೇಷ ಸ್ವರೂಪವನ್ನ ಜಗತ್ತಿನ ಸಮಸ್ತ ವ್ಯಾಪಾರಗಳ ಹಿಂದೆಯು ಕಾಣಬಹುದು.

ಮನುಷ್ಯನ ಮನೋಲೋಕದ ಸಾವುಗಳು ಕುತೂಹಲಕಾರಿಯಾದಂತವು. ಇಡಿ ಜೀವಮಾನಕ್ಕೆಂದು ತಬ್ಬಿಕೊಂಡ ಪ್ರೀತಿ ಸ್ನೇಹಗಳ ಸಂಬಂಧ ಅರ್ಥಕ್ಕೆ ಕೈಕೊಡುತ್ತವೆ. ಶಾಶ್ವತವೆನಿಸುವ ನಂಬಿಕೆ ಶ್ರದ್ಧೆ ಭಕ್ತಿಗಳು ಬುಡಮೇಲಾಗಿ ತೂರಿಹೋಗುತ್ತವೆ. ಪರಮ ಸತ್ಯವೆಂದುಕೊಂಡಿದ್ದ ವಿಚಾರಗಳು ಆದರ್ಶಗಳು ಹೊಟ್ಟೆಯುಬ್ಬರಿಸಿ ಅಂಗಾತ ಮಲಗುತ್ತವೆ. ಮಹಾ ಸುಂದರವೆನ್ನಿಸಿ ಬೆನ್ನುಹತ್ತಿದ್ದ ಕನಸುಗಳು ಕಲ್ಪನೆಗಳು ಕರಗಿ ಇಲ್ಲವಾಗುತ್ತವೆ, ಉದಾತ್ತ ಸಾರ್ವಕಾಲಿಕ ಎಂದೆಲ್ಲ ಭ್ರಮಿಸಿ ಬೆಳೆಸಿಕೊಂಡಿದ್ದ ಭಾವನೆಗಳು ತಿರುಗಿಬಿದ್ದು ಬಾಲ ಅಲ್ಲಾಡಿಸುತ್ತವೆ. ಮನುಷ್ಯ ಮನಸ್ಸು ಸ್ಥಾಪಿಸುವ ವೈಜ್ಞಾನಿಕ ಸತ್ಯಗಳು ಕೂಡ ಸತ್ತು ಹೊಸ ಸತ್ಯಗಳಿಗೆ ದಾರಿ ಮಾಡಿಕೊಡುತ್ತವೆ. ಇದರಿಂದಾಗಿ ಮನುಷ್ಯನ ಆಸೆ ಸುಖ ಸಂತೋಷ ನೆಮ್ಮದಿಗಳು ಸತ್ತು ನಿರಾಸೆ ದುಃಖ ಜಿಗುಪ್ಸೆಗಳು ರೆಕ್ಕೆ ಬಡಿಯುತ್ತವೆ. ಆದರೆ ಸಮಾಧಾನದ ಸಂಗತಿಯೆಂದರೆ ನಿರಾಸೆ ದುಃಖ ಜಿಗುಪ್ಸೆಗಳಿಗೂ ಸಾವಿರುವುದು. ಅವು ಸತ್ತಾಗ ಮತ್ತೆ ಹೊಸ ಆಸೆ ಭರವಸೆ ಉತ್ಸಾಹಗಳು ರೆಕ್ಕೆ ಬೀಸುತ್ತವೆ. ಮತ್ತೆ ಸಂತೋಷ ಚಿಗುರುತ್ತದೆ. ಮತ್ತೆ ನೆಮ್ಮದಿಯ ತಂಗಾಳಿ ಬೀಸುತ್ತದೆ. ನಮ್ಮ ಎಲ್ಲ ಕನಸುಗಳು ಕಲ್ಪನೆಗಳು ಅನುಭವಗಳು ನೆನಪಿನಲ್ಲಿ ಸತ್ತು ಮತ್ತೆ ಮತ್ತೆ ನೆನಪಿನಲ್ಲೆ ಹುಟ್ಟುತ್ತ ಸಾವಿನೊಡನೆ ಕಣ್ಣುಮುಚ್ಚಾಲೆ ಆಡುತ್ತವೆ.

ಮನುಷ್ಯ ತನ್ನ ಒಳಗೆ ಕಟ್ಟಿಕೊಳ್ಳುವ ಸಂಗತಿಗಳಿಗೆ ಇರುವಂತೆಯೆ ತನ್ನ ಒಳಗಿನ ಲೋಕಕ್ಕು ಹೊರಗಣ ವಿಶಾಲ ಜಗತ್ತಿಗು ಸೇತುವೆಯಾಗಿ ಬಳಸುವ ಸಾಧನಗಳಿಗು ಸಾವಿನ ಭೀತಿ ತಪ್ಪಿದ್ದಲ್ಲ. ಭಾಷೆ ಸಾಹಿತ್ಯ ಕಲೆ ಸಂಸ್ಕೃತಿಗಳೂ ಕಾಲದ ಮಹಾ ಬೀಸಿನಲ್ಲಿ ಸಾವಿನ ದಂಡೆಗೆ ಒಗೆತಾ ಒಗೆದು ಬೀಳುತ್ತವೆ. ಬೆಂಕಿ ನೀರು ಗಾಳಿ ಕ್ರಿಮಿ ಕೀಟ ಕ್ರೂರಮೃಗ ಏನೆಲ್ಲ ನಾಶಗೈವ ಶಕ್ತಿಗಳನ್ನ ಆಯುಧ ಮಾಡಿಕೊಳ್ಳುವ ಕಾಲ

ಕೊನೆಗೆ ತಾನೆ ಮಹಾಲಯ ಶಕ್ತಿಯಾಗಿ ಎಲ್ಲವನ್ನೂ ಇಲ್ಲವಾಗಿಸಿ ಶೂನ್ಯ ಸಂಪಾದಕನಾಗುತ್ತದೆ.

ಮನುಷ್ಯ ತನ್ನ ಸುತ್ತ ಕಟ್ಟಿಕೊಂಡ ಭೌತಿಕ ಜಗತ್ತಿಗು ಯಂತ್ರನಾಗರಿಕತೆಗೂ ಸಾವಿನಿಂದ ವಿನಾಯಿತಿಯಿಲ್ಲ. ಲಾವಾ ಪ್ರವಾಹ ಜಲಪ್ರಳಯಗಳಿಗೆ ಸಿಕ್ಕು ಇಡಿ ಇಡಿ ಪ್ರಾಚೀನ ನಾಗರಿಕತೆಗಳೆ ನಾಮಾವಶೇಷವಾದದ್ದನ್ನ ಕೇಳಿದ್ದೇವೆ. ಅವುಗಳಿಂದ ಕುಮ್ಮಕ್ಕು ಪಡೆದ ಪುರಾಣ ಕಥೆಗಳನ್ನ ಕೇಳಿದ್ದೇವೆ. ನೈಸರ್ಗಿಕ ಅನಾಹುತಗಳಿಂದಲ್ಲದೆ ಮನುಷ್ಯನ ಯುದ್ಧದ ತೀಟೆಯಿಂದ ಕೂಡ ನಾಗರಿಕತೆಗೆ ಭಾರಿ ಅಪಾಯವಿದೆ ಎಂದು ಈಗಾಗಲೆ ಎಲ್ಲರು ಮನಗಂಡಿದ್ದೇವೆ. ಯಂತ್ರಜಗತ್ತಂತು ಸಾವನ್ನೆ ಬಂಡವಾಳ ಮಾಡಿಕೊಂಡು ಲಾಭದ ತತ್ವವನ್ನ ಸಾರುವಂತದ್ದು, ಪುಟ್ಟ ಕೈಗಡಿಯಾರದಿಂದ ಹಿಡಿದು ರಾಕ್ಷಸಾಕಾರದ ರೋಬೊ ಹಾಗೂ ಉಪಗ್ರಹಗಳವರೆಗೆ ಎಲ್ಲವೂ ಕೆಟ್ಟುನಿಲ್ಲುವಂಥವೆ ಒಂದಲ್ಲ ಒಂದು ದಿನ. ಸತ್ತ ಬಸ್ಸು ಕಾರು ಲಾರಿ ರೇಡಿಯೋ ಟೀವಿ ಗಡಿಯಾರಗಳ ಅಸ್ಥಿಪಂಜರಗಳನ್ನ ನಗರದ ಮೂಲೆಗಳಲ್ಲಿ ಗುಜರಿಗಳಲ್ಲಿ ಕಾಣುತ್ತಲೆ ಇರುತ್ತೇವೆ. ಇವು ಯಾವೂವೂ ಶಾಶ್ವತವಲ್ಲ. ತಮ್ಮ ನಿರ್ಮಾಪಕನ ಹಾಗೆಯೆ ತಾವೂ ಇದ್ದಕ್ಕಿದಂತೆ ಪಟಕ್ಕನೆ ಸತ್ತು ಕೂಡುತ್ತವೆ.

ಕಾಲ ಎಂಬುದು ಆದಿ ಅಂತ್ಯವಿಲ್ಲದ ಸಮುದ್ರವಿದ್ದೀತು. ಆದರೆ ಮನುಷ್ಯನ ದೃಷ್ಟಿಯಿಂದ ನೋಡಿದಾಗ ಕಾಲವೂ ಸಾಯುವಂತೆ ಕಾಣುತ್ತದೆ, ಕ್ಷಣ ಕ್ಷಣವೂ ಸಾಯುತ್ತದೆ. ದಿನಗಳು ಸಾಯುತ್ತವೆ. ರಾತ್ರಿಗಳು ಸಾಯುತ್ತವೆ. ಯುಗಗಳು ಕೂಡ ಸತ್ತು ಇತಿಹಾಸದಲ್ಲಿ ಹೂತು ಹೋಗುತ್ತವೆ. ಮನುಷ್ಯನ ಬದುಕನ್ನ ನೋಡಿದರೆ ಅವನ ಬಾಲ್ಯ ಯವ್ವನಗಳು ಮತ್ತೆ ಹುಟ್ಟಿದಂತೆ ಸತ್ತು ಹೋಗುತ್ತವೆ.

ಸಾವು ಹೀಗೆ ಸಹಸ್ರಮುಖಿಯಾಗಿ ಕಾಡುವುದರಿಂದಲೆ ಮನುಷ್ಯನ ಬದುಕು ಒಂದು ಅಗಾಧ ಹೋರಾಟವಾಗಿರುವುದು. ಒಂದು ಸುಂದರ ಸಾಹಸವಾಗಿರುವುದು. ಸಾವು ಶತಸಿದ್ಧವೆಂದರೂ ಒಂದಲ್ಲ ಒಂದು ರೀತಿ ಅಮರನಾಗಲು ಮರುಹುಟ್ಟು ಪಡೆಯಲು ಹವಣಿಸುವ ಮನುಷ್ಯ ಎಂಥ ಅದ್ಭುತಜೀವಿ ಎನಿಸುವುದಿಲ್ಲವೆ ?

**ಮರುಹುಟ್ಟಿನ ಗುಟ್ಟು**

ಮಂಗನಾಗಿದ್ದವ ಬುದ್ಧಿವಿಕಾಸದಿಂದ ಮಾನವನಾದ. ಬುದ್ಧಿ ನಿಸರ್ಗದ ಆಗುಹೋಗುಗಳನ್ನ ಗ್ರಹಿಸತೊಡಗಿತು. ಬುದ್ಧಿಯನ್ನ ಬಲವಾಗಿ ಅಲುಗಾಡಿಸಿದ್ದು ಸಾವು-ಚಿದಂಬರ ರಹಸ್ಯವಾಗಿ ಕಾಡಿತು. ಮನುಷ್ಯಗೆ ಮನದಟ್ಟಾಯಿತು, ಸಾವನ್ನ ಗೆಲ್ಲುವುದು ಅಸಾಧ್ಯ ಎಂದು. ದೈಹಿಕವಾಗಿ ಗೆಲ್ಲಲಾಗದಿದ್ದರೆ ಬೌದ್ಧಿಕವಾಗಿಯಾದರು ಗೆಲ್ಲ

ಬೇಕೆಂದು ಛಲ ತೊಟ್ಟ. ಸಾವಿನ ಚಿಂತನೆಯಿಂದ ಅಮರತ್ವ ಮುಕ್ತಿ ಮರುಹುಟ್ಟುಗಳ ಕಲ್ಪನೆಗಳು ಗರಿಗಟ್ಟಿ ನಿಂತವು. ದೈಹಿಕ ಅನುಭವಕ್ಕೆ ಹೊರತಾದ ಈ ಕಲ್ಪನೆಗಳು ಸ್ವಾಭಾವಿಕವಾಗಿಯೆ ಅಲೌಕಿಕ ಬಣ್ಣ ವಾಸನೆ ಪಡೆದುಕೊಂಡವು. ಇಂಥ ಅಲೌಕಿಕ ಕಲ್ಪನೆಗಳಿಗೆ ನೈಸರ್ಗಿಕ ಉದಾಹರಣೆಗಳಿಂದ ಜೀವ ತುಂಬಿದ. ತರ್ಕದ ಕಾಲುವೆಗಳಲ್ಲಿ ಹಾಯಿಸಿ ಅವಕ್ಕೆ ಸಿದ್ಧಾಂತದ ರೂಪಕೊಟ್ಟ. ಬೌದ್ಧಿಕ ಸತ್ಯಗಳಾಗಿಸಿ ಪ್ರಚಾರ ಮಾಡಿದ, ಮರುಭೂಮಿಯಲ್ಲಿ ಹೆಣವನ್ನ ಕೆಡದಂತೆ ರಕ್ಷಿಸಿಡುವ ವಿಧಾನ ಕಂಡುಕೊಂಡು ಭವ್ಯಗೋರಿಗಳಲ್ಲಿ ಸತ್ತ ಪರಾಕ್ರಮಿಗಳ ಶವಗಳನ್ನ ಕಾದಿರಿಸಿ ಪುನರ್ಜನ್ಮ ಪಡೆಯುವರೆಂದು ಕಾದ, ಬೇರೆ ನಾಡುಗಳಲ್ಲಿ ಕೊಳೆತ ದೇಹ ನಶ್ವರ ಎಂದು ಸುಟ್ಟುಹಾಕಿ ಆತ್ಮ ಆಕಾಶದಲ್ಲಿನ ಸರ್ವಶಕ್ತನ ಬಳಿ ಸೇರಿತು ಎಂದು ನಂಬಿ ಕೂತ. ಮಧ್ಯ ಸೋಮರಸ ತಯಾರಿಸುವುದ ಕಲಿತು ಅವುಗಳ ನಶೆಯಲ್ಲಿ ಅಮೃತ ಅಮರತ್ವಗಳ ಕನಸು ಕಂಡ. ಜೀತದಾಳುಗಳ ದಾಸ ದಾಸಿಯರ ಸಂಕಟ ಮನಗಂಡು ಮುಕ್ತಿಯ ಆಸೆಗೆ ನೀರೆರೆದ. ಈ ಎಲ್ಲದರ ಸುತ್ತ ವಿಧಿನಿಷೇಧಗಳು ಹೆಣೆದುಕೊಂಡವು. ಪುರಾಣಗಳು ಅರಳಿದವು. ಧಾರ್ಮಿಕ ವಿಧಾನಗಳು ರೂಢಿಗೆ ಬಂದವು. ಇವನ್ನೆಲ್ಲ ನಿಯಂತ್ರಿಸುವ ದೇವರು ಹುಟ್ಟಿದ. ಮನುಷ್ಯನ ಮನಸ್ಸಿನ ಪೀಠವನ್ನ ಆಕ್ರಮಿಸಿಕೊಂಡು ಅವನನ್ನ ಧರ್ಮ ಆಧ್ಯಾತ್ಮ ಅನುಭಾವಗಳ ಬೆನ್ನುಹತ್ತುವಂತೆ ಮಾಡಿದ.

ಬುದ್ಧಿ ಸುಮ್ಮನಿರಬೇಕಲ್ಲ. ಬಂಡೆದ್ದಿತು. ಇದೆಲ್ಲ ಊಹೆಯ ಅಸ್ತಿವಾರದ ಮೇಲೆ ನಿಲ್ಲಿಸಿದ ಕಟ್ಟುಕತೆ ಎಂದಿತು, ಊಹೆ ಮುಖ್ಯವಲ್ಲ ಸತ್ಯ ಮುಖ್ಯ ಎಂದು ಹೊಸತಾಗಿ ಶೋಧನೆಗೆ ಹೊರಟಿತು. ದೈಹಿಕ ಅನುಭವವನ್ನೆ ಮಾನದಂಡವನ್ನಾಗಿ ಬಳಸಿತು. ಅಮರತ್ವ ಮುಕ್ತಿ ಮರುಹುಟ್ಟುಗಳನ್ನ ಲೌಕಿಕ ಪರಿಭಾಷೆಯಲ್ಲಿ ವಿವರಿಸತೊಡಗಿತು. ತಂದೆಯಾದವನು ಮಗನ ಮೂಲಕ ಮರುಹುಟ್ಟು ಪಡೆಯುತ್ತಾನೆ. ಮಗನ ಸಂತತಿ ಮೂಲಕ ತಲೆಮಾರುಗಳಿಗೆ ಇಳಿದು ಬರುತ್ತ ವಂಶರೂಪದಲ್ಲಿ ಅಮರನಾಗುತ್ತಾನೆ. ಅದರ ಹೊರತು ಬೇರೆ ಅಮರತ್ವ ಮರುಹುಟ್ಟು ಇಲ್ಲವೆ ಇಲ್ಲ ಎಂಬ ಭೌತವಾದಿ ಸಿದ್ಧಾಂತವನ್ನ ಪ್ರತಿಪಾದಿಸಿತು ಬುದ್ಧಿ.

ಇವೆರಡು ತಾತ್ವಿಕ ದೃಷ್ಟಿಕೋನಗಳಿಂದಲು ಸಮಾಧಾನಗೊಳ್ಳದ ಸಾಮಾನ್ಯರ ಮನಸ್ಸು ಸಾವಿನ ಭೀತಿಯನ್ನ ತಡೆಯದಾಯಿತು. ಈ ಭೀತಿಯ ಅಲೌಕಿಕ ಸ್ವರೂಪವಾಗಿ ದೇವರು, ಲೌಕಿಕ ಸ್ವರೂಪವಾಗಿ ದುಡ್ಡು ಅವರ ಬಹಿರ್ಮುಖಿ ಬದುಕನ್ನ ಆಕ್ರಮಿಸಿದವು. ದೇವರನ್ನ ಆರಾಧಿಸಿ ಶಾಶ್ವತ ಸಂತೋಷ. ಸ್ವರ್ಗದಲ್ಲಿ ತುಂಡುಜಾಗ, ಅವನ್ನ ಆಗುಮಾಡುವ ಪುಣ್ಯ ಇವನ್ನ ಮುಂಗಡ ಹಿಡಿದಿಟ್ಟುಕೊಳ್ಳಲು ಕೆಲವರು ಹವಣಿಸಿದರು. ಮತ್ತೆ ಕೆಲವರು ಅಲ್ಲಿನ ಬಗ್ಗೆ ತಲೆಯನ್ನೆ ಕೆಡಿಸಿಕೊಳ್ಳದೆ ಇಲ್ಲಿ ದುಡ್ಡಿನ

ಮುಖೇನ ಸಿಗುವ ಬಂಗಾರ ಭೂಮಿ ಹೆಂಡ ಹೆಣ್ಣು ವೈಭವ ಕೀರ್ತಿಗಳಲ್ಲಿ ಮುಳು ಗಿದರು.

ಈ ನಡುವೆ ಚಿಂತನಶೀಲ ಶಿಷ್ಟ ಸಂಸ್ಕೃತಿಗೆ ಎದುರಾಗಿ ಸಂಕೇತ ಶಕ್ತಿಯ ಜನಪದ ಸಂಸ್ಕೃತಿಗಳು ಅಲ್ಲಲ್ಲಿ ವಿಶಿಷ್ಟವಾಗಿ ಬೇರುಬಿಡತೊಡಗಿದವು. ಹುಡುಗ ಹುಡುಗಿಯರು ವಯಸ್ಸಿಗೆ ಬಂದು ಸುಖದ ಹೊಸ ಹುಟ್ಟು ಪಡೆಯುವುದು, ಬದುಕು ಸಂತಾನ ಚಕ್ರ ದಿಂದಾಗಿ ನಿರಂತರಗೊಳ್ಳುವುದು, ಭೂಮಿಯ ಫಲವಂತಿಕೆಯೆ ಬದುಕಿಗೆ ಮೂಲಾಧಾರ ವಾಗಿರುವುದು ಇವುಗಳ ಹಿಂದಿನ ಸಾವು ಮತ್ತು ಮರುಹುಟ್ಟಿನ ಪುನರಾವರ್ತನೆಯನ್ನು ಪ್ರತಿನಿಧಿಸಲು ಒಸಿರಿಸ್, ಆರ್ಫಿಯಸ್, ಡಯನೀಸಸ್, ಜೋಕುಮಾರ ಕಾಮ ಮುಂತಾದ ದೇವತೆಗಳು ತಲೆ ಎತ್ತಿದರು. ಬಸವನಮಾವಾಸ್ಯೆ, ಭೂಮಿ ಹುಣ್ಣಿಮೆ, ಹೋಳಿಹಬ್ಬಗಳಂತ ಆಚರಣೆಗಳು ಜಾರಿಗೆ ಬಂದವು.

ವಿಜ್ಞಾನ ಯುಗದ ಮಾನವನ ವಿಚಾರ ಲಹರಿಗಳೆ ಬೇರೆ. ತನ್ನ ಸಾವು ನಿಶ್ಚಿತ ಎಂದು ಚೆನ್ನಾಗಿ ಅರಿತ ಅವ ತಾನು ಹೋದಮೇಲು ತನ್ನ ಹೆಸರು ಉಳಿಯುವಂತ ವೈಜ್ಞಾನಿಕ ಸಾಹಸವನ್ನೊ ಆಧ್ಯಾತ್ಮಿಕ ಚಿಂತನೆಯನ್ನೊ ಕಲಾತ್ಮಕ ಸಾಧನೆಯನ್ನೊ ಮಾಡಲು ಹೆಣಗುತ್ತಾನೆ. ಅವನ ಅಮರತ್ವದ ಕಲ್ಪನೆ ಎಂದರೆ ಇದೆ. ಗ್ರೀಕ್ ಕಲಾ ವಿದ ಮಡಕೆಯ ಮೇಲೆ ಚಿತ್ರಿಸಿದ ಸುಂದರ ಹಳ್ಳಿ ಜೀವನವನ್ನ ಕೀಟ್ಸ್ ತನ್ನ ಸಾವರಿ ಯದ ಕವಿತೆಯಲ್ಲಿ ಹಿಡಿದಿಟ್ಟಿಲ್ಲವೆ ? ನ್ಯೂಟನ್ ಬೆಳಕನ್ನೆ ವಿಭಜಿಸಿ ಏಳು ಬಣ್ಣಗಳ ಸತ್ಯ ಪೊಮ್ಮಿಸಲಿಲ್ಲವೆ ? ಜಲಾಲುದ್ದೀನ್ ರೂಮಿ, ಅಲ್ಲಮ, ನಾಗಲಿಂಗರು ಅನಭಾವ ಶಿಖರವೇರಿ ಕೂತು ನಮ್ಮ ಅರಿವಿನಲ್ಲಿ ಸ್ಫಟಿಕದ ಶಲಾಕೆ ಆಡಿಸುವುದಿಲ್ಲವೆ ? ಅವರೆ ಅಮರಜೀವಿಗಳು ವಿಜ್ಞಾನಯುಗದವರಿಗೆ.

ಮರ ಅದೆ ಇರುತ್ತದೆ ; ಎಲೆಗಳ ಹಂದರ ಬದಲಾಗುತ್ತಿರುತ್ತದೆ. ನೆಲ ಅದೆ ಇರುತ್ತದೆ ; ಪೈರು ಹಾಳೆಗಳು ಮಗುಚುತ್ತ ಹೋಗುತ್ತವೆ. ಆಕಾಶ ಅದೆ ಇರುತ್ತದೆ ನಕ್ಷತ್ರಗಳು ಉದುರಿ ಹೊಸ ನಕ್ಷತ್ರಗಳು ಚಲಾವಣೆಗೆ ಬರುತ್ತವೆ. ಋತುಗಳು ಸತ್ತು ; ಋತುಗಳು ಹುಟ್ಟುತ್ತವೆ. ಹಾಗೆಯೆ ವಿಶ್ವ ಅದೆ ಇರುತ್ತದೆ. ಮನುಷ್ಯನ ಹಳೆ ತಲೆ ಮಾರುಗಳು ಉರುಳಿ ಹೊಸ ತಲೆಮಾರುಗಳು ಅರಳುತ್ತಿರುತ್ತವೆ. ಈ ಲಯಬದ್ಧತೆ ಅರ್ಥವಾದರೆ ಮನುಷ್ಯನ ವೈಯಕ್ತಿಕ ಸಾವಿನ ಒಳನೋವು ಕಡಿಮೆಯಾಗುತ್ತದೆ.

ನಾವು ತಿಳಿದುಕೊಂಡಿರುವಂತೆ ಸಾವು ಬದುಕಿನ ಕೊನೆಗೊಮ್ಮೆ ಬರುವಂತದೇನಲ್ಲ ಅದು ದಿನ ದಿನವೂ ಬರುತ್ತಿರುತ್ತದೆ. ನಾವೂ ಮತ್ತೆ ಮತ್ತೆ ಮರುಹುಟ್ಟು ಪಡೆ ಯುತ್ತಲೆ ಇರುತ್ತೇವೆ. ತಾತ್ಕಾಲಿಕ ಸಾವಿನಂತ ನಿದ್ದೆ ದಿನದಿನದ ಮೈಮನಸ್ಸಿನ

ಸುಸ್ತನ್ನ ಸಾಯಿಸಿ ನಮಗೆ ಮರುಹುಟ್ಟಿನ ಹೊಸತನ ಕೊಡುತ್ತದೆ. ನಮ್ಮ ಹಸಿವು ತೃಷೆಗಳು ಆಸೆ ಬಯಕೆಗಳೂ ಹಾಗೆಯೆ. ಆಗಾಗಿನ ತೃಪ್ತಿಯಲ್ಲಿ ಸತ್ತಂತೆ ಮಲಗಿದ ಈ ಪ್ರವೃತ್ತಿಗಳು ಮತ್ತೆ ಹೊಸ ಹಂಬಲ ಹೊತ್ತು ಮರುಕಳಿಸುತ್ತವೆ. ಇವುಗಳ ಲಯಬದ್ಧ ಪಂಕ್ತಿಕೆ ಬದುಕಿಗೆ ಒಂದು ರುಚಿಯನ್ನ ಚೆಲುವನ್ನ ತಂದುಕೊಡುತ್ತದೆ.

ಮನುಷ್ಯನ ಪ್ರತಿಭೆ ಕೂಡ ಸಾವು ಮತ್ತು ಮರುಹುಟ್ಟಿನ ಚಕ್ರದಲ್ಲಿ ತಿರುಗುವಂತದೆ. ಒಮ್ಮೆ ಕಾರ್ಯಸಾಧನೆಯಾಯಿತೆಂದರೆ ಒಂದಷ್ಟು ಕಾಲ ತೆಪ್ಪಗೆ ಕೂಡುತ್ತದೆ. ಮತ್ತೆ ಹೊಸ ಹುರುಪಿನಲ್ಲಿ ಹೊಸ ಹೊಳಹು ಪಡೆದು ಕ್ರಿಯಾಶೀಲವಾಗುತ್ತದೆ. ಇದು ಅವನ ದೈಹಿಕ ಪ್ರವೃತ್ತಿಗಳಾದ ಹಸಿವು ನೀರಡಿಕೆ ಕಾಮಗಳ ಪೂರೈಕೆಯಿಂದ ಮೂಡುವ ಪ್ರಸನ್ನತೆಯ ಮೇಲೆ ಅವಲಂಬಿತವಾಗಿದೆ. ಹೀಗೆ ದೇಹ ಮನಸ್ಸು ಎರಡರ ವ್ಯಾಪಾರಗಳೂ ಸಾಯುತ್ತ ಮತ್ತೆ ಮತ್ತೆ ಹುಟ್ಟುತ್ತ ಕನಸು ಕಟ್ಟುತ್ತ ಕ್ರಿಯಾಶೀಲವಾಗುತ್ತ ಬದುಕನ್ನ ತೂಗಿಸುತ್ತವೆ.

ಬದುಕಿನ ಪೆಟ್ಟುಗಳು ನಮ್ಮ ಕನಸುಗಳನ್ನ ಸಂತೋಷಗಳನ್ನ ಕೊಲ್ಲುತ್ತವೆ. ನಾವು ಹೊಸ ಕನಸು ಕಟ್ಟಿ ಸಂತೋಷಿಸುತ್ತೇವೆ. ಚಿರನಿದ್ರೆಯಾದ ಸಾವಿನ ಕೊನೆ ಕ್ಷಣದವರೆಗು ಸಾಯುವ ಮರುಹುಟ್ಟು ಪಡೆಯುವ ಬದುಕಿನ ಆಟ ನಡೆಯುತ್ತಲೆ ಇರುತ್ತದೆ. ಧರ್ಮಗಳು ನಮಗೆ ಹೇಳಿಕೊಡಬೇಕಾದ್ದು ಇದೆ ಗುಟ್ಟನ್ನ. ಅದು ಬಿಟ್ಟು ಧರ್ಮಪೀಠಗಳು ಬರಿ ಕರ್ಮಠವಾಗಿ ಕುರುಡಾದಾಗ ಅವುಗಳ ಹೊಟ್ಟೆ ಸೀಳಿಕೊಂಡು ಹೊಸ ಮಾನವೀಯ ಧರ್ಮಗಳು ಹುಟ್ಟುತ್ತವೆ. ಬುದ್ಧ ಬಸವಣ್ಣರ ಧರ್ಮ ಹುಟ್ಟಿದ ಹಾಗೆ. ಧರ್ಮಗಳನ್ನೂ ಮೀರಿದೆತ್ತರಕ್ಕೆ ಕರೆದೊಯ್ದು ಸತ್ಯಶೂನ್ಯವನ್ನ ಮನಸ್ಸಿನ ಮುಂದೆ ಹಿಡಿಯುವುದೆ ಅನುಭಾವ. ಅಲ್ಲಮ ಹೇಳುವ ಹಾಗೆ "ಸಾವು ಜೀವ ಸಂಬಂಧದ ಠಾವ ತೋರಬಲ್ಲಾತನೆ ಗುರು ಗೊಹೇಶ್ವರನು."

# ಗರ್ಭ

ಮೀನು ಹುಟ್ಟಿದಂತೆ ಕಡಲಲ್ಲಿ ಸು
ವಾಸನೆಯ ಹೊಸಸೊಗಸು ಬಣ್ಣಗಳಲ್ಲಿ
ಪುಳಕ್ಕನೆ ಅಡಿಯೇರುವ ಎಳೆಕಾಯ
ಮುತ್ತುವ ಸೂರ್ಯ ತಬ್ಬಿಕೊಂಡ ನೋಡು,
ಅಂತೆ ಮೂಲೆ ಮೂಲೆಗೂ ರೋಮಾಂಚನ
ತುಂಬುಗೊರಳ ಬೆವರು ಹನಿಹನಿ ಮಳೆಯಂತೆ
ಚಿಪ್ಪ ಮುತ್ತಂತೆ, ಚಂದನದ ಚಿತ್ರ ಚೈತ್ರಕವನ
ದೊಳಗೆ ಮೂಡಿ ಕಾಡಿದಂತೆ, ಹಿಡಿದಿಡು ಕಳಸುಗಳ
ಹೆಣ್ಣ ಬಿಸಿರಾಸರೆಯಲ್ಲಿ ಇದೀಗ ಆಕಾರವಿಲ್ಲದ
ಭ್ರೂಣ, ಅವಳಿಗೀಗಲೇ ಹೆಸರಿಡುವ ಸಡಗರ

ಕಪ್ಪು ನಗರದ ಕೊರಗು ಕವಿಗಳ ಕರೆದು
ಸ್ವಂತೈಸಿ ಕಾವ್ಯಗಳಲ್ಲಿ ಬದುಕು; ನೋಡು
ಯಾರೋ ಅಳುತ್ತಾರೆ, ಆನೀರ ಹೆರವರಿಗೂ
ಹಂಚುತ್ತಾ ನಗುವನ್ನು ತೊಳೆಯುತ್ತಾರೆ, ಮಾತಿಗಿರಲಿ
ಇವರ ನಿಟ್ಟುಸಿರ ಜೋಗುಳಕ್ಕೆ ಹಸುಗಂದ
ಪುಟ್ಟರೆಪ್ಪೆಗಳ ರಾಗದೊಳಗೆ ತೂಗಿ
ತನ್ನಂತೆ ತಾನೇ ಮಂತ್ರ ತಂತ್ರದ ಮೋಡಿ
ಹೂಟಕ್ಕೆ ಹೂ ಆಗಸದಿಂದ ಹುಟ್ಟುವ ಹಾಗೆ
ನಿದ್ದೆಗೆ ಸುಖಿಸುತ್ತದೆ, ಕ್ರಾಂತಿಯಂತೆ-ಅಂಗಳದಲ್ಲಿ
ಕಾಳ್ಗಿಚ್ಚ ಮಧ್ಯೆ ಹೊಸ ಮೊಗ್ಗಿಗೆ ಮೂರು ತಿಂಗಳು

ತವರೂರ ದಾರಿಯಲಿ ಮನವನ್ನೆಯಿನ್ನಿಡುವ
ಹೆಜ್ಜೆಗಳೆನಿಸಿ ಹಿಂದುದ್ದ ಹರಿದು ಬಂದ ಆ
ದೂರ ನದಿ ಝುಳ ಝುಳನೆ ಗೆಜ್ಜೆ ಕಟ್ಟಿ
ನೊರೆ ತೆರೆ ಮೇಲೆ ಮೀರಿ ಕುಣಿವ ನವಿಲ ನೋಡು,
ನೀಲಗಿರಿ ಹಾಳೆ ಮೇಲೆ ಹೊಳೆ ಹೊಳೆವ ಮಾತು ಸಾರಿ
ಸರಿಯುತ್ತಿದೆ. ಆಮೇಲೆ ಒಲವ ದನಿ

ಗಾಯತ್ರಿ ಬಿ.ಎಸ್ 1618 'ಸುಮಶ್ರೀ' ಎರಡನೇ ಘಟ್ಟ ರಾಜಾಜಿನಗರ ಬೆಂಗಳೂರು-560010

ಮೌನದಲಿ ವಿರಹ ಬರಲಿ ಬರೆದ ನೀಳ
ಪದ್ಯ ಪದಗಳಂತೆ, ಕವಿ ನಿನ್ನಂತೆ ಅನಂತ
ನೋವುಗಳ ಮುಚ್ಚಿ, ಹಚ್ಚ ಹಸುರಿನ ಕೆಳಗೆ
ಆರು ಮೆಟ್ಟಿಲದಾಟಿ ಬೆಳಕ ಕಾಯುವ ಕಣ್ಣು.

ಬೀಜ ನೆಲದಾಳದಲ್ಲಿ ಹೊತಿಟ್ಟು ಸುತ್ತ
ಸೋನೆ ಚಿಮುಕಿಸಿ ಹೊತ್ತಾರೆ ಎದ್ದೆದ್ದು
ಬಂದು ಎಳೆ ಚಿಗುರುಗಳು ಬಂದವೋ ನೋಡು,
ಜೀವ ಚಲಿಸುತ್ತದೆ, ವಸಂತದ ಚಂದಕ್ಕೆ
ತೊನೆದಾಡುತ್ತದೆ ಆಗೀಗ ಅತ್ತಿತ್ತ ಹೊರಳಿ
ಕೈಚಾಚಿ ಹೊಸಗಾಳಿಗೆ ಹಗುರಾಗಿ ಮೈಯೊಡ್ಡುವಂತೆ
ಮಣ್ಣುಮಾಗಿ ಮೊಗದ ಮಿದುಮಾತುಗಳಲ್ಲಿ ಕವಿತೆ
ಗುಂಪು ಕಟ್ಟುತ್ತವೋ ಗುರುತಿನ ಬದುಕು ಅದು
ಹೊರಗೆದ್ದು ಹಾರಾಡುವ ತವಕ, ಒಂಭತ್ತು ಹಡೆದ
ಒಂದೊಂದು ದಿನಕ್ಕೂ ಥಾಳಿಯಿಟ್ಟ ಸುಳಿನೋವು.

—ಗಾಯತ್ರಿ. ಬಿ.ಎಸ್.

## ಚೀನಾ ಅಲ್ಪಸಂಖ್ಯಾತರ ನೂರು ಜನಪದ ಕವನಗಳು

### ಜಗತ್ತಿನ ಮೈತುಂಬ

ಜಗತ್ತಿನ ಮೈತುಂಬ ಬರೀ
ನ್ಯಾಯವೇ ತುಂಬಿದೆಯಂತೆ :
ನ್ಯಾಯದ ಆ ಪರಿಯ ನೋಡಿರೋ.

ಹತ್ತಿಗಿಡದ ಬುಡಕೆ ಮೈಬಗ್ಗಿಸಿ
ಗೊಬ್ಬರ-ನೀರು ಊಡದ ಜನ :
ನೊಚ್ಚನೆ ಬಟ್ಟೆ ತೊಡುತಾರೋ.

ಕೆಸರು ಗದ್ದೆ ಹೆಸರು ಕಿವಿಗೆ ಬಿದ್ದರೆ
ಸಾಕು ಬಚ್ಚಲು ಮನೆಗೆ ಓಡುವ ಜನ :
ಬೆಳ್ಳಾನೆ ಅಕ್ಕಿಯ ಮಿಣ್ಣನೆ ಉಣುತಾರೋ.

---

ಸುಚೇತನ ಸ್ವರೂಪ, ಪ್ರಜಾವಾಣಿ ವರದಿಗಾರರು, ಬೀದರ್

ಕುಂತರೆ ಏಳಲಾರದ ಎದ್ದರೆ
ನಿಲ್ಲಲಾರದ ಸಾವನಗೌಡ :
ಹದಿನಾರರ ಹೆಣ್ಣೇ ಬೇಕಂತಾನೋ.
ನ್ಯಾಯದ ಆ ಪರಿಯ ನೋಡಿರೋ.

## ಹಣೆಬರಹವಂತೆ

ಹುಚ್ಚೆಳ್ಳು ಹೂವು
ಹೊಲದ ತುಂಬ
ಮೈದುಂಬಿ ತೊನೆದಾಡುತಾವೆ.

ಅಪ್ಪ-ಅಮ್ಮ
ಮದುವೆ ಮಾಡಿದರು
ನನ್ನ ಒಂದು ಮಾತೂ ಕೇಳದೆ.

ಗೋಣು ಮುರಿದು ಸತ್ತ
ಮನುಷ್ಯನ ಗೋರಿ ಸೇರಿದ
ಹೂವಾಯ್ತೇ ನನ್ನ ಬದುಕು.

ಕೇಳಿದರೆ ಹೇಳುತ್ತಾರೆ
ಕೇಳದಿದ್ದರೂ ಹೇಳುತ್ತಾರೆ
ಎಲ್ಲಾ ನನ್ನ ಹಣೇಬರಹ.

ಹುಚ್ಚೆಳ್ಳು ಹೂವು
ಹೊಲದ ತುಂಬ
ತೊನೆಯುತ್ತಿಲ್ಲ ತೂಗಾಡುತ್ತಿಲ್ಲ.

## ಅವನು-ಅವಳು

೧

ಅವನು ಜಾಣ ಅವಳು ಜಾಣೆ
ನೋಡಿದರೂ ನೋಡದಂತೆ
ರಸ್ತೆ ದಾಟುತಾರೆ ಎಲ್ಲರೆದುರು.

ಅವಳು ಜಾಣ ಅವನು ಜಾಣ್
ಕಂಡರೂ ಕಾಣದಂತೆ ಇರುತಾರೆ
ಸೂರ್ಯನೆದುರಲಿ ಗುಟ್ಟು ಬಚ್ಚಿಟ್ಟು.

೨

ಹೊತ್ತು ಕಂತಿದ ಮೇಲೆ
ಯಾರೂ ಕೇಳದ ಜಾಗದಲಿ
ಮಾತನಾಡುವ ನಾಲಿಗೆ ತುಂಬ.

ನನ್ನ ಜಾತಿ ಬೇರೆಯಂತೆ
ನಿನ್ನ ಜಾತಿ ಬೇರೆಯಂತೆ
ನಕ್ಕುಬಿಡುವ ತಲೆ ತುಂಬ.

ಆಮೇಲೆ ಊರಿನ ಊರೂರ
ಗುಂಟ ನಮ್ಮದೇ ಮನೆ ಮಾತು.

ಪುನರ್ ರಚನೆ:
**ಸುಚೇತನ ಸ್ವರೂಪ**

---

"ಕನಸಿಗೊಂದು ಕಣ್ಣು" ಪುಸ್ತಕ ರೂಪದಲ್ಲಿ ಬಂದಿದೆ.

ಮೂಲ ಬೆಲೆ : 15 ರೂ.

ಶೂದ್ರದ ಸದಸ್ಯರಿಗೆ : 10 ರೂ.

---

# ಎರಿಕ್‌ಫ್ರಾಮ್ ವಿಚಾರಗಳು

—ಓ. ಎಲ್. ನಾಗಭೂಷಣಸ್ವಾಮಿ

## ಗಂಡು–ಹೆಣ್ಣು

ಗಂಡು ಹೆಣ್ಣುಗಳ ನಡುವೆ ಹುಟ್ಟಿನಿಂದಲೇ ಬಂದ ವ್ಯತ್ಯಾಸಗಳಿವೆ. ಆದ್ದರಿಂದಲೇ ಗಂಡಸರ ಸ್ವಭಾವವೇ ಬೇರೆ, ಹೆಂಗಸರ ಸ್ವಭಾವವೇ ಬೇರೆ; ಗಂಡಸರ ವರ್ತನೆಯೇ ಬೇರೆ, ಹೆಂಗಸರ ವರ್ತನೆಯೇ ಬೇರೆ—ಇದು ಒಂದು ಅಭಿಪ್ರಾಯ. ಹೆಣ್ಣು ಗಂಡಿಗೆ ಅಧೀನವಾಗಿರಬೇಕು; ಅವಳ ಆಸೆ ಆಕಾಂಕ್ಷೆಗಳೆಲ್ಲ ಗಂಡಸಿನ ಇಚ್ಛೆಯನ್ನು ಅವಲಂಭಿಸಿದ್ದು ಎಂಬ ಧೋರಣೆ ಈ ಅಭಿಪ್ರಾಯದಿಂದಲೇ ಹುಟ್ಟಿದ್ದು.

ಹೀಗೆಯೇ ಇನ್ನೂ ಒಂದು ಅಭಿಪ್ರಾಯವಿದೆ : ಗಂಡು ಹೆಣ್ಣುಗಳಲ್ಲಿ ಮೂಲಭೂತ ವ್ಯತ್ಯಾಸಗಳು ಇಲ್ಲವೇ ಇಲ್ಲ. ಇಬ್ಬರ ಆತ್ಮವೂ ಒಂದೇ. ಇಬ್ಬರೂ ಸಮಾನರು- ಎಂಬ ಅಭಿಪ್ರಾಯ.

ಪ್ರಪಂಚದ ಎಲ್ಲ ಮತ. ಧರ್ಮ, ತತ್ವ ಶಾಸ್ತ್ರಗಳು ಇವೆರಡರಲ್ಲಿ ಯಾವುದಾದರೊಂದನ್ನು ಎತ್ತಿ ಹಿಡಿಯುತ್ತ ಬಂದಿದೆ. ಇದನ್ನು ಚರಿತ್ರೆಯ ಉದ್ದಕ್ಕೂ ನೋಡಬಹುದು. ಇವೆರಡರಲ್ಲಿ ಯಾವುದಾದರೊಂದು ಅಭಿಪ್ರಾಯ ಮುಖ್ಯವಾಗುವುದಕ್ಕೆ ರಾಜಕೀಯ ಕಾರಣಗಳು ಸಾಮಾಜಿಕ ಕಾರಣಗಳೂ ಇವೆ. ಫ್ರಾನ್ಸಿನಲ್ಲಿ ಕ್ರಾಂತಿ ನಡೆದಾಗ ಸಮಾನತೆಯನ್ನು ಸಾಧಿಸುವುದು ಮುಖ್ಯವಾಗಿತ್ತು. ಆ ಸಮಯದಲ್ಲಿ ಗಂಡು-ಹೆಣ್ಣುಗಳ ನಡುವೆ ಇರುವ ವ್ಯತ್ಯಾಸಕ್ಕೆ ವಿದ್ಯಾಭ್ಯಾಸ, ಸಂಸ್ಕೃತಿ, ಸಮಾಜದ ಪರಿಸ್ಥಿತಿ ಇವುಗಳು ಮಾತ್ರ ಕಾರಣ ಎಂಬ ವಾದ ಪ್ರಬಲವಾಗಿತ್ತು. ಫ್ರಾಮ್‌ನನ್ನು ಮರೆತು ನಮ್ಮದೇ ಉದಾಹರಣೆ ನೋಡಿ. ಸಾಂಪ್ರದಾಯದ ಹಿಂದೂ ಧರ್ಮ ಹೆಣ್ಣಿಗೆ ಸಾಮಾಜಿಕ ಬದುಕನ್ನು ನಿರಾಕರಿಸುತ್ತದೆ, ಆಸ್ತಿಯ ಹಕ್ಕು ಇಲ್ಲವೆನ್ನುತ್ತದೆ, ಸ್ವಾತಂತ್ರ್ಯಕ್ಕೆ ಹೆಣ್ಣು ಅರ್ಹಳಲ್ಲ ಎನ್ನುತ್ತದೆ. ಹೆಣ್ಣು ಇದನ್ನ ಮೀರಲು ಸಾಧ್ಯವಾಗಿದ್ದು, ಸಮಾಜ ಅದನ್ನ ನಿಧಾನವಾಗಿ ಒಪ್ಪಿದ್ದು ಬದಲಾದ ರಾಜಕೀಯ ಪರಿಸ್ಥಿತಿಗಳಿಂದಲೇ ಅಲ್ಲವೇ ?

---

ಓ. ಎಲ್. ನಾಗಭೂಷಣಸ್ವಾಮಿ, ಇಂಗ್ಲಿಷ್ ಅಧ್ಯಾಪಕ, ಸಹ್ಯಾದ್ರಿ ಕಾಲೇಜು, ಶಿವಮೊಗ್ಗ-577203

ಗಂಡು-ಹೆಣ್ಣುಗಳ ಸ್ವಭಾವದ ಪ್ರಶ್ನೆ ಸಾಮಾಜಿಕ-ಆರ್ಥಿಕ-ರಾಜಕೀಯ ಸ್ಥಿತಿಗಳೊಡನೆ ತಳುಕು ಹಾಕಿಕೊಂಡಿದೆ. ಇದರಿಂದ ಮನಶ್ಶಾಸ್ತ್ರಜ್ಞರ ಮತ್ತು ಮಾನವಿಕ ವಿಜ್ಞಾನಿಗಳ ಪರಿಸ್ಥಿತಿ ಇಕ್ಕಟ್ಟಿಗೆ ಸಿಕ್ಕುಬಿದ್ದಿದೆ. ಗಂಡು-ಹೆಣ್ಣುಗಳಿಬ್ಬರೂ ಸ್ವಾತಂತ್ರ್ಯ ಸಮಾನತೆಯನ್ನು ಅನುಭವಿಸಲು ಸಮರ್ಥರು ಎಂದು ಹೇಳುವ ಮೊದಲು ಅವರಿಬ್ಬರ ನಡುವೆ ಯಾವ ವ್ಯತ್ಯಾಸವೂ ಇಲ್ಲ ಎಂಬುದನ್ನು ಸಾಬೀತು ಮಾಡುವುದು ಈ ವಿಜ್ಞಾನಿಗಳಿಗೆ ಅಗತ್ಯವಾಗಿ ಬಿಟ್ಟಿದೆ. ಇದು ಕೂಡ ಅತಿರೇಕ. ಹೆಣ್ಣು ಗಂಡಿಗಿಂತ ಭಿನ್ನ ಅಂದರೆ ಅರ್ಥವೇನು ? ಈ ಭಿನ್ನತೆಯ ಪರಿಣಾಮವೇನು ? ಇವು ಮುಖ್ಯ ಪ್ರಶ್ನೆಗಳು.

ಗಂಡು-ಹೆಣ್ಣುಗಳ ನಡುವೆ ಹುಟ್ಟಿನಿಂದಲೇ ಬಂದ ದೈಹಿಕ ವ್ಯತ್ಯಾಸಗಳಿವೆ, ಈ ವ್ಯತ್ಯಾಸಗಳು ಅವರ ಸ್ವಭಾವ ಮತ್ತು ವರ್ತನೆಗಳ ಭಿನ್ನತೆಗೆ ಕಾರಣವಾಗುತ್ತವೆ. ಆದರೆ ಈ ಭಿನ್ನತೆಯ ಮೇಲೆ ಸಾಮಾಜಿಕ ಕಾರಣಗಳ ಪ್ರಭಾವ ತುಂಬ ಇದೆ. ಎಷ್ಟೆಂದರೆ ಸಾಮಾಜಿಕ ಪರಿಸ್ಥಿತಿಗೆ ಅನುಗುಣವಾಗಿ ಗಂಡು-ಹೆಣ್ಣುಗಳ ವರ್ತನೆಯಲ್ಲಿರುವ ಸ್ವಾಭಾವಿಕ ಭಿನ್ನತೆ ಹೆಚ್ಚಾಗಬಹುದು, ಕಡಿಮೆಯಾಗಬಹುದು ಅಥವ ತಿರುವುಮುರುವೂ ಆಗಬಹುದು. ಆದರೆ ಇದು ಮುಖ್ಯ- ಗಂಡು ಹೆಣ್ಣುಗಳ ನಡುವೆ ವ್ಯತ್ಯಾಸ ಇದೆ ಎಂದ ಮಾತ್ರಕ್ಕೆ ಇದು ಮೇಲು-ಕೀಳು, ಶ್ರೇಷ್ಠ-ಕನಿಷ್ಠ ಎಂಬುದನ್ನ ನಿರ್ಧರಿಸುತ್ತದೆ ಅಂತ ಅರ್ಥ ಅಲ್ಲ. ಮೇಲು-ಕೀಳು ಎಂಬುದು ಆಯಾ ಸಮಾಜದಲ್ಲಿ ಆಯಾ ಕಾಲದಲ್ಲಿ ಗಂಡು-ಹೆಣ್ಣು ಸಮಾಜದ ಬದುಕಿನಲ್ಲಿ ಎಂಥ ಪಾತ್ರ ವಹಿಸಲು ಅವಕಾಶವಿದೆ ಎಂಬುದನ್ನು ಆಧರಿಸಿದ್ದು ಅಷ್ಟೆ.

ಪ್ರತಿಗಾಮಿ ಚಿಂತನೆಯ ಸ್ವರೂಪ ಹೇಗಿರುತ್ತದೆ ಗೊತ್ತೆ ? ಸಮಾನತೆ ಎಂದರೆ ವ್ಯತ್ಯಾಸಗಳು ಇಲ್ಲದ ಸ್ಥಿತಿ. ಆದರೆ ಬದುಕಿಗೆ ಮುಖ್ಯವಾದ ಪ್ರತಿಯೊಂದು ಸಂಗತಿಯೂ, ಪ್ರತಿಯೊಂದು 'ಜೀವಂತ' ವಸ್ತುವೂ ಮತ್ತೊಂದು ಸಂಗತಿಯಿಂದ ಮತ್ತೊಂದು ಜೀವಿಯಿಂದ ಭಿನ್ನವಾಗಿರುತ್ತದೆ. ವ್ಯತ್ಯಾಸಗಳನ್ನು ತೋರ್ಪಡಿಸುತ್ತದೆ. ಆದ್ದರಿಂದ ಸಮಾನತೆ ಎಂಬುದು ಕಲ್ಪನೆ, ಭ್ರಮೆ, ಸುಳ್ಳು, ಸಮಾನತೆ ಅಸಾಧ್ಯ. ಇದು ಪ್ರತಿಗಾಮಿ ಚಿಂತನೆಯ ಮಾದರಿ. ಉದಾರವಾದಿಗಳು ವ್ಯತ್ಯಾಸಗಳು ಭಿನ್ನತೆಗಳು ಇಲ್ಲವೇ ಇಲ್ಲ. ಇರುವುದೆಲ್ಲ ಬರಿಯ ಪರಿಸ್ಥಿತಿಯ ಕೈವಾಡ ಅನ್ನುತ್ತಾರೆ. ಸಾಮಾನ್ಯ ಮನುಷ್ಯನಿಗೆ ಉದಾರವಾದಿಗಳ ಮಾತು ಸುಳ್ಳು ಅನ್ನಿಸುತ್ತದೆ. ವ್ಯತ್ಯಾಸಗಳು ಭಿನ್ನತೆಗಳು ಹೆಜ್ಜೆಗೇ ಕಾಣುತ್ತಿರುವಾಗ ಪ್ರತಿಗಾಮಿಗಳ ಚಿಂತನೆಯೇ ಸರಿ ಅನ್ನಿಸುತ್ತದೆ. ಆದರೆ ಸಮಾನತೆಯ ನಿಜವಾದ ಅರ್ಥ ಬೇರೆಯೇ ಇದೆ. ಸ್ವಾತಂತ್ರ್ಯವನ್ನು ಅನುಭವಿಸುವ ಮತ್ತು ಬದುಕನ್ನು ಅನುಭವಿಸುವ ಸಾಮರ್ಥ್ಯ ಎಲ್ಲ ಮನುಷ್ಯರಲ್ಲೂ ಸಮಾನವಾಗಿ ಇದ್ದೇ ಇದೆ. ಈ ನಂಬಿಕೆಯ ಆಧಾರದಿಂದ ಒಂದು

ರಾಜಕೀಯ ನಿಲುವು ಮೂಡುತ್ತದೆ; ಯಾವ ಒಬ್ಬ ವ್ಯಕ್ತಿಯೂ, ಯಾವ ಒಂದು ಗುಂಪೂ ಇನ್ನೊಬ್ಬ ವ್ಯಕ್ತಿಯ, ಇನ್ನೊಂದು ಗುಂಪಿನ ಸುಖಕ್ಕೆ ಸ್ವಾರ್ಥಕ್ಕೆ ಸಾಧನ ವಾಗುವ ಉಪಕರಣವಾಗಬಾರದು. ಪ್ರತಿ ವ್ಯಕ್ತಿಯೂ ಒಂದು ವಿಶ್ವ. ಅವನೇ ಅವನ ಬದುಕಿನ ಉದ್ದೇಶ. ವ್ಯಕ್ತಿಯನ್ನು ಇತರರಿಂದ ಬೇರ್ಪಡಿಸುವ ವಿಶಿಷ್ಟತೆ ಗಳಿವೆ. ಈ ವಿಶಿಷ್ಟತೆಗಳನ್ನು ಆಧರಿಸಿಯೇ ಅವನು ತನ್ನ ಬದುಕನ್ನು ಸಾರ್ಥಕ ಮಾಡಿಕೊಳ್ಳಬೇಕು. ಸಮಾನತೆ ಎಂಬುದು ಈ ವ್ಯಕ್ತಿ ವಿಶಿಷ್ಟತೆಯ, ವ್ಯತ್ಯಾಸದ ಪೂರ್ಣ ಬೆಳವಣಿಗೆಗೆ ಮೂಲಭೂತವಾದ ಆಧಾರ.

ಗಂಡು-ಹೆಣ್ಣುಗಳ ದೈಹಿಕ ವ್ಯತ್ಯಾಸ ಅವರ ಸ್ವಭಾವಗಳ ವ್ಯತ್ಯಾಸಕ್ಕೆ ಹೇಗೆ ಕಾರಣವಾಗುತ್ತವೆ? ಈ ವ್ಯತ್ಯಾಸಕ್ಕೆ ಇರುವ ಸಾಮಾಜಿಕ ಮುಖಗಳು ಯಾವುವು? ಈ ಪ್ರಶ್ನೆಗಳನ್ನು ಅನೇಕ ರೀತಿಯಲ್ಲಿ ಅಧ್ಯಯನ ಮಾಡಬಹುದು. ಇಲ್ಲಿ ಲೈಂಗಿಕ ವರ್ತನೆಯನ್ನು ಮಾತ್ರ ಗಮನಿಸಿದೆ.

ಲೈಂಗಿಕ ಕ್ರಿಯೆಯನ್ನು ಯಶಸ್ವಿಯಾಗಿ ನಡೆಸಲು ಸಮರ್ಥನಾಗಿರಬೇಕಾದರೆ ಗಂಡು ತನ್ನ 'ನಿಮಿರಿಕೆ'ಯನ್ನು ಉಳಿಸಿಕೊಳ್ಳಬೇಕು. ನಿಮಿರಿಕೆ ಇಲ್ಲದಿದ್ದರೆ ತನಗಾಗಲಿ ಜೊತೆಯ ಹೆಣ್ಣಿಗಾಗಲಿ ಸುಖ ಸಿಗುವುದು ಸಾಧ್ಯವಿಲ್ಲ. ಅಂದರೆ, ಹೆಣ್ಣಿಗೆ ಲೈಂಗಿಕ ಸುಖ ಸಿಗಬೇಕಾದರೆ, ಗಂಡು ತಾನು ಸಾಕಷ್ಟು ಸಮಯದವರೆಗೆ ನಿಮಿರಿಕೆಯನ್ನು ಉಳಿಸಿಕೊಳ್ಳಬಲ್ಲೆ ಎಂಬುದನ್ನು ಸಾಬೀತು ಮಾಡುವುದು ಅಗತ್ಯವಾಗುತ್ತದೆ. ಆದರೆ ಹೆಣ್ಣು ಲೈಂಗಿಕವಾಗಿ ಗಂಡನ್ನು ತೃಪ್ತಿಪಡಿಸಬೇಕಾದರೆ ಸಾಬೀತು ಮಾಡಬೇಕಾದ್ದು ಏನೂ ಇಲ್ಲ. ಹೆಣ್ಣಿನ ಮಾನಸಿಕ ಉದ್ರೇಕ ಸಂತೋಷವನ್ನೂ ಹೆಚ್ಚಿಸಬಹುದು. ಆದರೆ ನಾವಿಲ್ಲಿ ದೈಹಿಕ ಕ್ರಿಯೆಯನ್ನು ಮಾತ್ರ ಗಮನಿಸುತ್ತಿದ್ದೇವೆ. ಹೆಣ್ಣು ಏನನ್ನೂ ಸಾಬೀತು ಮಾಡುವ ಅಗತ್ಯ ಇಲ್ಲ. ಅಗತ್ಯವಿರುವುದು ಗಂಡನ್ನು ತೃಪ್ತಿಪಡಿಸ ಬೇಕೆಂಬ ಇಚ್ಛೆ ಮಾತ್ರ. ಈ ಇಚ್ಛೆ ಬಹಳ ಮುಖ್ಯವಾದ ಅಂಶ. ಗಂಡಿಗೆ ಲೈಂಗಿಕ ತೃಪ್ತಿಗಾಗಿ, ಹೆಣ್ಣು ದೊರೆಯುವುದು ಅವಳ ಇಚ್ಛೆಯನ್ನೂ ಅವಲಂಬಿಸಿದೆ. ಅಷ್ಟು ಮಟ್ಟಿಗೆ ಗಂಡು ಅವಳ ಇಚ್ಛೆಗೆ ಅಧೀನ. ತಾನು ಗಂಡಿಗೆ ಲಭ್ಯಳು ಎಂಬುದು ಹೆಣ್ಣಿನ ಪ್ರಜ್ಞಾಪೂರ್ವಕ ತೀರ್ಮಾನ, ಆಯ್ಕೆ. ಆದರೆ ಗಂಡು ಹೀಗೆ ಪ್ರಜ್ಞಾ ಪೂರ್ವಕವಾಗಿ ತೀರ್ಮಾನಿಸಿ ಲೈಂಗಿಕ ಕ್ರಿಯೆಗೆ ತೊಡಗುವುದು ಸಾಧ್ಯವಿಲ್ಲ. ನಿಮಿರಿಕೆ ಕೇವಲ ಬುದ್ಧಿಯ ಇಚ್ಛೆಯಿಂದ ಬರುವುದಿಲ್ಲ. ಹೆಣ್ಣು ಇಲ್ಲದಿದ್ದಾಗಲೂ ಗಂಡು ನಿಮಿರಿ ಲೈಂಗಿಕ ಆಸೆ ಹೊಂದಿರಬಹುದು, ಅಥವ ಲೈಂಗಿಕ ಆಸೆ ತುಂಬ ಇದ್ದಾಗಲೂ ನಿಮಿರುವುದು ಸಾಧ್ಯವಾಗದೆ ಹೋಗಬಹುದು. ಅಲ್ಲದೆ ಗಂಡಿನ ಅಸಾಮರ್ಥ್ಯ ವನ್ನು ಬಚ್ಚಿಡಲು ಆಗುವುದಿಲ್ಲ. ಆದರೆ ಹೆಣ್ಣಿನ ನಿರಾಸಕ್ತಿಯೋ, ಅಸಾಮರ್ಥ್ಯವೋ ಹೀಗೆ ಸ್ವಯಂ ಸ್ಪಷ್ಟವಲ್ಲ. ಗಂಡಿಗೆ ಅವಳ ಅನಾಸಕ್ತಿ ತಿಳಿಯಬಹುದಾದರೂ,

ಹೆಣ್ಣಿಗೆ ಇರುವ ನಟನೆಯ ಅವಕಾಶ ಜಾಸ್ತಿ. ಆಸಕ್ತಿ ಇಲ್ಲದಿರುವಾಗಲೂ ಹೆಣ್ಣು ತುಂಬ ಆಸಕ್ತಳಂತೆ ನಟಿಸಬಹುದು. ಆದರೆ ಗಂಡಿಗೆ ನಟನೆಯ ಅವಕಾಶ ಇಲ್ಲವೇ ಇಲ್ಲ. ಹೆಣ್ಣು ಒಪ್ಪಿದರೆ ಆಯಿತು, ಗಂಡಿಗೆ ತೃಪ್ತಿ ಸಿಕ್ಕೀತು. ಆದರೆ ಹೆಣ್ಣಿನ ಸ್ಥಿತಿ ಬೇರೆ. ಅವಳಿಗೆ ಎಷ್ಟೇ ತೀವ್ರವಾದ ಲೈಂಗಿಕ ಆಸೆಯಿದ್ದರೂ, ಕೇವಲ ಆ ಆಸೆಯಿಂದಲೇ ತೃಪ್ತಿಸಿಗುವುದು ಅಸಾಧ್ಯ. ಆಕೆಯನ್ನು ಗಂಡು ಕೂಡ 'ಬಯಸಬೇಕು'. ಆಕೆಯ ಬಗ್ಗೆ ಗಂಡಿನಲ್ಲಿ ಹುಟ್ಟುವ ಬಯಕೆ ನಿಮಿರಿಕೆಯನ್ನು ಉಂಟುಮಾಡಬೇಕು. ಮತ್ತು ಆಕೆಗೆ ತೃಪ್ತಿ ಸಿಗುವವರೆಗೆ ಅವನ ನಿಮಿರಿಕೆ ಉಳಿದಿರಬೇಕು.

ಗಂಡು ಸಾಬೀತು ಮಾಡಬೇಕು. ಹೆಣ್ಣು ಸಾಬೀತು ಮಾಡಬೇಕಾದ್ದು ಏನೂ ಇಲ್ಲ; ಹೆಣ್ಣು ತನ್ನ ಲೈಂಗಿಕ ತೃಪ್ತಿಗೆ ಗಂಡಿನ ಇಚ್ಛೆಯನ್ನೇ ಅವಲಂಬಿಸಬೇಕು. ಈ ವ್ಯತ್ಯಾಸಗಳಿಂದ ಲೈಂಗಿಕ ಕ್ರಿಯೆಗೆ ಸಂಬಂಧಿಸಿದಂತೆ ಗಂಡು-ಹೆಣ್ಣುಗಳಲ್ಲಿ ಹುಟ್ಟುವ ಆತಂಕದ ಸ್ವರೂಪವೂ ಬೇರೆ ಬೇರೆಯಾಗುತ್ತದೆ. ಸಾಬೀತು ಮಾಡುವ ಅಗತ್ಯವಿರುವ ಗಂಡಿಗೆ ಪ್ರತಿಯೊಂದು ಲೈಂಗಿಕ ಕ್ರಿಯೆಯೂ ಒಂದು ಪರೀಕ್ಷೆ,ಸ್ಪರ್ಧೆ. 'ನಾನು ಸೋತರೆ' ಎಂಬ ಭಯ ಅವನನ್ನು ಕಾಡುತ್ತದೆ. ವಿಫಲತೆಯ ಸಾಧ್ಯತೆ ಗಂಡಿನ ಆತಂಕಕ್ಕೆ ಕಾರಣ. ಹೆಣ್ಣು ಗಂಡಿನ ಬಯಕೆಯನ್ನು ಆಧರಿಸಿದವಳಾದ್ದರಿಂದ 'ನಾನು ಗಂಡಿಗೆ ಬೇಕಾಗದೆ ಹೋದರೆ', 'ನಾನು ಒಂಟಿಯಾಗಿಬಿಟ್ಟರೆ' ಎಂಬುದು ಆತಂಕದ ಕಾರಣವಾಗುತ್ತದೆ. ಗಂಡಿನ ಆತಂಕ 'ಅಹಂ'ನ ಮೂಲದಿಂದ ಹುಟ್ಟಿದ್ದು. ಹೆಣ್ಣಿನ ಕಣ್ಣಲ್ಲಿ ತಾನು ಕೀಳಾದೇನು ಎಂಬ ಭಯದಿಂದ ಹುಟ್ಟಿದ್ದು. ಹೆಣ್ಣಿನ ಆತಂಕ ತನಗೆ ಸಿಗಬೇಕಾದ ಲೈಂಗಿಕ ಸುಖ, ತೃಪ್ತಿ ಸಿಗದೆ ಹೋದರೆ–ಎಂಬ ಭಾವದಿಂದ ಹುಟ್ಟಿದ್ದು.

ಈ ಭಿನ್ನ ರೀತಿಯ ಆತಂಕಗಳಿಗೆ ಕಾರಣವಾಗುವ ಇನ್ನೊಂದು ಮುಖ್ಯ ಅಂಶ ವಿದೆ. ಮನುಷ್ಯ ಸಂಕುಲವನ್ನು ಎಷ್ಟೊಂದೆಲ್ಲ ರೀತಿಯಲ್ಲಿ ವಿಂಗಡಿಸಬಹುದು. ಒಂದು ಭಾಷೆಯನ್ನ ಆಡುವವರು, ಒಂದು ಪ್ರದೇಶದಲ್ಲಿ ವಾಸಿಸುವವರು, ಒಂದು ಕುಲಕ್ಕೆ ಸೇರಿದವರು, ಒಂದೇ ಬಗೆಯ ಮೈ ಬಣ್ಣದವರು ಇತ್ಯಾದಿ. ಆದರೆ ಎಲ್ಲಕ್ಕಿಂತ ಮೂಲಭೂತ ವಿಂಗಡಣೆ ಎಂದರೆ ಗಂಡು-ಹೆಣ್ಣು ಎಂಬ ವಿಭಜನೆ. ಕುಟುಂಬದ ಮತ್ತು ತಮ್ಮ ಕುಲದ ಮುಂದುವರಿಕೆಗೆ, ತಮ್ಮ ಲೈಂಗಿಕ ತೃಪ್ತಿಗೆ ಗಂಡು ಹೆಣ್ಣು ಒಬ್ಬರಿಗೊಬ್ಬರು ಅಗತ್ಯ. ಆದರೆ ಎಲ್ಲಿ ಎರಡು 'ಗುಂಪು'ಗಳು ಒಟ್ಟಿಗೆ ಇರುವ ಅಗತ್ಯ ಬರುತ್ತದೋ ಅಲ್ಲಿ ಕೇವಲ ಸಾಮರಸ್ಯ ಹೊಂದಾಣಿಕೆ ಮಾತ್ರ ಇರುವುದಿಲ್ಲ. ವಿರಸ ದ್ವೇಷಗಳೂ ಇರುವುದು ಸಾಧ್ಯ. ಗಂಡು-ಹೆಣ್ಣಿನ ಲೈಂಗಿಕ ಸಂಬಂಧ ಕೂಡ ಈ ವಿರಸ–ದ್ವೇಷದ ಸಾಧ್ಯತೆಯಿಂದ ಹೊರತಾದದ್ದಲ್ಲ. ಗಂಡು-ಹೆಣ್ಣುಗಳಲ್ಲಿ ಪ್ರೀತಿಸುವ ಸಾಮರ್ಥ್ಯ ಇರುವಂತೆ ದ್ವೇಷಿಸುವ ಸಾಮರ್ಥ್ಯವೂ ಇದೆ. ಇದೂ ಆತಂಕಕ್ಕೆ ಕಾರಣವಾಗುತ್ತದೆ. ಈ ಸಾಧ್ಯತೆಯು ಗಂಡು-ಹೆಣ್ಣುಗಳಲ್ಲಿರುವ ದೌರ್ಬಲ್ಯವನ್ನು ಬಲವಾಗಿ ತಟ್ಟುತ್ತದೆ, ಆಘಾತ ಉಂಟುಮಾಡುತ್ತದೆ.

ಗಂಡಿಗೆ ಆಗುವ ಆಘಾತ ಮತ್ತು ಆತಂಕವೇ ಬೇರೆ ಹೆಣ್ಣಿಗೆ ಆಗುವ ಆಘಾತ, ಆತಂಕವೇ ಬೇರೆ. ತಾನು ಸೋಲಬಹುದು ಎಂಬ ಆತಂಕವಿರುವ ಗಂಡು ಅದರಿಂದ ತಪ್ಪಿಸಿಕೊಳ್ಳಲು ಘನತೆ, ಗೌರವ ಎಂಬ ಅಪೇಕ್ಷೆಗಳನ್ನು ಬೆಳೆಸಿಕೊಳ್ಳುತ್ತಾನೆ. ತನ್ನ ಬಗ್ಗೆ ಇರುವ ಯಾವುದೇ ನಿರೀಕ್ಷೆಯನ್ನು ಪೂರೈಸಲು ತಾನು ಸಮರ್ಥ ಎಂದು ಪ್ರೀತಿಸಿದ ಹುಡುಗಿಯನ್ನು, ಎಲ್ಲ ಹೆಂಗಸರನ್ನು, ಎಲ್ಲ ಗಂಡಸರನ್ನು ಮತ್ತು ತನ್ನನ್ನು ತಾನು ಒಪ್ಪುವಂತೆ ಮಾಡಲು ಹೆಣಗುತ್ತಾನೆ. ತನ್ನ ಲೈಂಗಿಕ ವಿಫಲತೆಯ ಭಯವನ್ನು ಮರೆ ಮಾಡಲು ಅಥವ ಸರಿದೂಗಿಸಲು ಬದುಕಿನ ಇತರ ವಲಯಗಳಲ್ಲಿ ಯಶಸ್ಸು ಪಡೆಯಲು ಹಂಬಲಿಸುತ್ತಾನೆ. ದೃಢ ಮನಸ್ಸು, ದೈಹಿಕ ಸಾಮರ್ಥ್ಯ, ಬುದ್ಧಿವಂತಿಕೆ ಇವು ಯಾವ ಯಾವ ರಂಗಗಳಲ್ಲಿ ಗೆಲುವು ತರಬಹುದೋ ಅದರಲ್ಲೆಲ್ಲ ಗೆಲ್ಲುವುದಕ್ಕೆ ಬಯಸುತ್ತಾನೆ. ಗೆಲುವು ಗೌರವ, ಘನತೆಯನ್ನು ತರುತ್ತದೆ. ಗೌರವ ಘನತೆಯ ಹಂಬಲ ಅವನಲ್ಲಿ ಸ್ಪರ್ಧೆಯ ಮನೋಭಾವವನ್ನು ಹುಟ್ಟಿಸುತ್ತದೆ. ಯಾವ ರಂಗದಲ್ಲೂ ಯಾವ ವಿಧದಲ್ಲೂ ನಾನು ಇತರ ಗಂಡುಗಳಿಗಿಂತ ಕಡಮೆಯಲ್ಲ ಎಂದು ಸ್ಪರ್ಧೆಯ ಮೂಲಕ ಸಾಬೀತು ಮಾಡಲು ಬಯಸುತ್ತಾನೆ. ಆಧುನಿಕ ಅರ್ಥವ್ಯವಸ್ಥೆ ಮತ್ತು ಸಮಾಜ ಸ್ಪರ್ಧೆ ಹಾಗೂ ಯಶಸ್ಸನ್ನು ಪ್ರೋತ್ಸಾಹಿಸುತ್ತದೆ. ಇದರಿಂದ, ಸಾಮಾಜಿಕ ಮನ್ನಣೆ ಪಡೆಯಬೇಕೆಂಬ ಒತ್ತಡ ಗಂಡಿನಲ್ಲಿ ಘನತೆ ಗೌರವಗಳ ಹಂಬಲವನ್ನು ಬೆಳೆಸುತ್ತದೆ ಎಂಬುದು ನಿಜ, ಆದರೂ ಘನತೆ ಗೌರವಗಳ ಹಂಬಲಕ್ಕೆ ಕೇವಲ ಸಾಮಾಜಿಕ ಮಾತ್ರವಲ್ಲದ ಲೈಂಗಿಕ ಕಾರಣಗಳೂ ಇವೆ ಎಂಬುದು ಮುಖ್ಯವಾದದ್ದು.

ಘನತೆ ಗೌರವಗಳ ಅಪೇಕ್ಷೆ ಗಂಡಿನ 'ಜಂಬ'ಕ್ಕೆ ಕಾರಣವಾಗುತ್ತವೆ. ಗಂಡಿಗಿಂತ ಹೆಣ್ಣಿಗೆ ಜಂಭ ಹೆಚ್ಚು ಎಂಬ ಅಭಿಪ್ರಾಯವಿದ್ದರೂ, ಇಲ್ಲಿ ಜಂಬದ ಸ್ವರೂಪ ಮುಖ್ಯ. ಗಂಡಿನ ಜಂಬ "ತೋರಿಸಿಕೊಳ್ಳುವುದರಲ್ಲಿ" ಇದೆ. ಪ್ರೀತಿಸುವುದರಿಂದ ಹಿಡಿದು ಜೀವ ಕೊಟ್ಟು ಹೋರಾಡುವ ಸನ್ನಿವೇಶದವರೆಗೆ ತಾನು ಎಂಥ ಕೆಲಸಕ್ಕೂ ಹಿಂಜರಿಯದ, ಹೆದರದ, ಸೋಲನ್ನು ಲೆಕ್ಕಿಸದ ಗಂಡು ನಾನು ಎಂದು ತೋರಿಸಿಕೊಳ್ಳುವ ಜಂಬ ಗಂಡಿನದು. ಈ ಜಂಬ, ಘನತೆಗಳ ಕಾರಣದಿಂದ ಗಂಡು ಅಪಹಾಸ್ಯಕ್ಕೆ, ಲೇವಡಿಗೆ ಹೆದರುತ್ತಾನೆ. ಅದರಲ್ಲೂ ಹೆಣ್ಣಿನಿಂದ ಆಗುವ ಲೇವಡಿಯನ್ನು ಸಹಿಸುವುದಿಲ್ಲ, ಹೆಣ್ಣು ಮತ್ತು ಇತರರು ತನ್ನನ್ನು ಅಪಹಾಸ್ಯ ಮಾಡಿಯಾರು ಎಂಬ ಭಯ ಗಂಡಿನಲ್ಲಿ ಹುಟ್ಟುವ ದ್ವೇಷಕ್ಕೆ ಕಾರಣವಾಗುತ್ತದೆ. ಈ ದ್ವೇಷ ರಕ್ಷಣೆಯ ಉಪಾಯವೂ ಹೌದು. ಹೆಣ್ಣನ್ನು ಆಳಬೇಕು. ಅವಳ ಮೇಲೆ ಅಧಿಕಾರವನ್ನು ಸ್ಥಾಪಿಸಬೇಕು, ನಾನು ದುರ್ಬಲೆ, ನಾನು ಕೀಳು ಅಂತ ಹೆಣ್ಣಿಗೆ ಅನ್ನಿಸಬೇಕು. ಗಂಡು ನನ್ನ ಹೊಡೆಯುತ್ತಾನೆ, ಉಪವಾಸ ಕೆಡವುತ್ತಾನೆ, ಕೊಲ್ಲುತ್ತಾನೆ ಎಂಬ ಭಯ ಹೆಣ್ಣಿಗೆ ಇರಬೇಕು. ಆಗ ಅವಳಿಗೆ ಗಂಡನ್ನು ಲೇವಡಿ ಮಾಡುವ ಧೈರ್ಯ ಒರುವುದೇ ಇಲ್ಲ. ಹೆಣ್ಣು ಲೇವಡಿ ಮಾಡದಿದ್ದರೆ ಗಂಡಿನ

ಘನತೆ ಮುಕ್ಕಾಗದೆ ಉಳಿಯಿತು, —ಈ ರೀತಿಯ ಯೋಚನೆಯ ಧಾಟಿಗೆ ಲೈಂಗಿಕ ಕಾರಣಗಳೇ ಅಲ್ಲದೆ ಸಾಮಾಜಿಕ ಕಾರಣಗಳೂ ಇವೆ. ತಂದೆ (ಗಂಡು)ಯೇ ಮುಖ್ಯವಾಗಿರುವ ಕುಟುಂಬ ವ್ಯವಸ್ಥೆ ಗಂಡಸಿನ ಜಂಬಕ್ಕೆ, ಅಧಿಕಾರಕ್ಕೆ ಕುಮ್ಮಕ್ಕು ಕೊಡುವಂಥದ್ದೇ ಆಗಿದೆ.

ಹೆಣ್ಣಿನ ಜಂಬದ ಸ್ವರೂಪ ಬೇರೆ. ತನ್ನ ತೃಪ್ತಿಗಾಗಿ ಗಂಡನ್ನು ಆಕರ್ಷಿಸುವುದು ಹೆಣ್ಣಿಗೆ ಅಗತ್ಯವಾಗುತ್ತದೆ. ಹಾಗೆ ನಾನು ಆಕರ್ಷಿಸಬಲ್ಲೆ ಎಂಬುದು ಹೆಣ್ಣಿನ ಜಂಬದ ಮೂಲದಲ್ಲಿರುವ ಕಾರಣ. ನಿಜ, ಗಂಡು ಕೂಡ ಆಕರ್ಷಿಸಬೇಕು. ಆದರೆ ಗಂಡಿನ ಲೈಂಗಿಕ ತೃಪ್ತಿ ಅವನಿಗಿರುವ ಲೈಂಗಿಕ ಆಕರ್ಷಣೆಯೊಂದನ್ನೇ ಆಧರಿಸಿದ್ದಲ್ಲ. ದೈಹಿಕ ಬಲ, ಸಾಮಾಜಿಕ ಅಂತಸ್ತು, ಶ್ರೀಮಂತಿಕೆಗಳನ್ನು ಬಳಸಿಕೊಂಡು ಗಂಡು ಹೆಣ್ಣನ್ನು ಆಕರ್ಷಿಸಬಹುದು. ಆದರೆ ಹೆಣ್ಣಿನ ಲೈಂಗಿಕ ತೃಪ್ತಿ ಮಾತ್ರ ಅವಳ ಲೈಂಗಿಕ ಆಕರ್ಷಣೆಯ ಸಾಮರ್ಥ್ಯವನ್ನೇ ಅವಲಂಬಿಸಿರುವಂಥದ್ದು. ಹೀಗೆ, ಹೆಣ್ಣು ತನ್ನ ತೃಪ್ತಿಗೆ ಗಂಡನ್ನು ಆಶ್ರಯಿಸಬೇಕಾದ್ದರಿಂದ, ಆಕರ್ಷಿಸಲೇ ಬೇಕಾದ್ದರಿಂದ ಅವಳಿಗೆ "ನಾನು ಗಂಡಸಾಗಿದ್ದಿದ್ದರೆ" ಎನ್ನುವುದು ತೀವ್ರವಾಗಿ ಕಾಡುವ ಆಸೆಯಾಗುತ್ತದೆ. ಈ ಆಸೆ ತನ್ನ ಆಶ್ರಿತ, ಅವಲಂಬಿತ, ಕಾಯಬೇಕಾದ ಸ್ಥಿತಿಯಿಂದ ಪಾರಾಗುವ ಹಂಬಲದ ರೂಪವಾಗಿರುತ್ತದೆ.

ಹೆಣ್ಣಿನ ವಿರುದ್ಧ ಗಂಡು ಬಳಸುವ ಅಸ್ತ್ರಗಳೆಂದರೆ— ಅವನ ದೈಹಿಕ ಬಲ ಮತ್ತು ಸಾಮಾಜಿಕ ಬಲ. ಹಾಗೇ ಹೆಣ್ಣಿಗೆ ಗಂಡಿನ ವಿರುದ್ಧ ಇರುವ ಅಸ್ತ್ರವೆಂದರೆ ಲೇವಡಿ ಮಾಡುವ ಸಾಮರ್ಥ್ಯ. ಗಂಡನ್ನು ತೀವ್ರವಾಗಿ ಲೇವಡಿ ಮಾಡಬೇಕೆಂದರೆ ಅವನ ಲೈಂಗಿಕ ಅಸಾಮರ್ಥ್ಯವನ್ನು ಹೆಣ್ಣು ಚುಚ್ಚಿ ಹೇಳಿದರೆ ಸಾಕು. ಈ ಲೇವಡಿ ವಾಚ್ಯವಾಗಿ "ನೀನು ಕೈಲಾಗದವನು" ಎಂದು ಹೇಳುವುದರಿಂದ ಹಿಡಿದು "ನಿನ್ನ ಕೈಯಲ್ಲಿ ಆಗುತ್ತಾ" ಎಂಬ ಸಂಶಯ ತೋರುವ, ಲೈಂಗಿಕ ಕ್ರಿಯೆಯಲ್ಲಿ ಸಹಕಾರ ನೀಡದಿರುವ ರೂಪಗಳನ್ನೂ ತಾಳಬಹುದು. ಗಂಡಿಗೆ ಹೆಣ್ಣಿನ ಬಗ್ಗೆ ಇರುವ ಅಸಹನೆಯು, ದೈಹಿಕ, ಸಾಮಾಜಿಕ, ರಾಜಕೀಯ ಬಲಗಳನ್ನು ಬಳಸಿಕೊಂಡು ಅವಳನ್ನು ಹತೋಟಿಯಲ್ಲಿಟ್ಟುಕೊಳ್ಳುವ ಇಚ್ಛೆಯಾಗಿ ಕಾಣಿಸಿಕೊಳ್ಳುತ್ತದೆ. ಹಾಗೆಯೇ ಹೆಣ್ಣಿಗೆ ಗಂಡಿನ ಬಗ್ಗೆ ಇರುವ ಅಸಹನೆಯು ಲೇವಡಿಯಾಗಿ ಆ ಮೂಲಕ ಗಂಡನ್ನು ವಿಹ್ವಲಗೊಳಿಸುವ ವರ್ತನೆಯಾಗಿ ಕಾಣಿಸಿಕೊಳ್ಳುತ್ತದೆ.

ಹೆಣ್ಣು ಮಕ್ಕಳನ್ನು ಹೆರಬಲ್ಲಳು. ಗಂಡು ಹೆರಲಾರ. ನಮ್ಮ ಕಾಲದಲ್ಲಿ ಗಂಡು ಹೆಣ್ಣಿಗಿಂತ ಮೇಲು ಎಂಬ ಭಾವನೆ ವ್ಯಾಪಕವಾಗಿದೆ. "ಸಹಜ ಉತ್ಪಾದನೆ'ಗಿಂತ ತಾಂತ್ರಿಕ ಉತ್ಪಾದನೆಗಳು ಹೇರಳವಾಗಿರುವ ಬದುಕಿನ ರೀತಿ ಈಗ ನಮ್ಮದಾಗಿದೆ. ಈ

ಸಂದರ್ಭದಲ್ಲಿ—ಹೆಣ್ಣು ಹೆರಬಲ್ಲಳು, ಗಂಡು ಹೆರಲಾರ ಎಂಬ ಸರಳ ಸತ್ಯದ ಪರಿಣಾಮಗಳು ನಮ್ಮ ಗಮನಕ್ಕೆ ಬರುವುದೇ ಇಲ್ಲ. ಆದರೆ ಚರಿತ್ರೆಯನ್ನು ಸ್ವಲ್ಪ ಗಮನಿಸಿ. ಮನುಷ್ಯ ಉತ್ಪಾದನೆಯ ಉಪಕರಣಗಳನ್ನು ಕಂಡುಕೊಂಡಿರದ ಕಾಲ. ಆಗ ಮನುಷ್ಯ ಪ್ರತಿಯೊಂದಕ್ಕೂ ಪ್ರಕೃತಿಯ ಸಹಜ ಉತ್ಪಾದನೆಯನ್ನೇ ಅವಲಂಬಿಸಿಕೊಂಡಿದ್ದ. ಮಗು ಹೇಗೆ ಹುಟ್ಟುತ್ತದೆ ಎಂಬುದು ವೈಜ್ಞಾನಿಕವಾಗಿ ತಿಳಿದಿರಲಿಲ್ಲ. ಆ ಸಂದರ್ಭದಲ್ಲಿ ಹೆಣ್ಣು ಭೂಮಿಯಂತೆ ಸಹಜವಾಗಿ ಜೀವ ನೀಡಬಲ್ಲವಳಾಗಿ ಗಂಡಿನ ಗೌರವಕ್ಕೆ, ಭಯಕ್ಕೆ, ಅಸೂಯೆಗೆ ಕಾರಣಳಾಗಿದ್ದಳು. ಗಂಡು ಸಹಜವಾಗಿ ಸೃಷ್ಟಿಸಲಾರ, ಕೊಲ್ಲಬಲ್ಲ. ಪ್ರಾಣಿಗಳನ್ನ ಶತ್ರುಗಳನ್ನ ಕೊಲ್ಲಬಲ್ಲ. ಆದರೆ ಮನುಷ್ಯ ಸಮಾಜ ವಿಕಾಸ ಹೊಂದುತ್ತ ಬಂತು. ಪ್ರಕೃತಿಯೊ ಮೇಲೇ ಅವಲಂಬಿತವಾಗಿರುವುದನ್ನು ಬಿಟ್ಟು, ಮನಸ್ಸನ್ನು ಬುದ್ಧಿಯನ್ನು ಬಳಸಿ, ಉಪಕರಣಗಳನ್ನು ಸೃಷ್ಟಿಸಿ ಆ ಮೂಲಕ ತನಗೆ ಬೇಕಾದುದನ್ನು ಉತ್ಪಾದಿಸಲು ಮನುಷ್ಯ ಕಲಿತುಕೊಂಡ. ಈಗ, ಗಂಡಿಗೆ ಸಹಜ ಜೀವ ಸೃಷ್ಟಿ ತನಗೆ ಸಾಧ್ಯವಿಲ್ಲ ಎಂಬ ಕೀಳರಿಮೆಯಿಂದ ಪಾರಾಗುವುದು, ತಾನೂ ಬುದ್ಧಿ ಬಲದಿಂದ ಮತ್ತೆ ಏನನ್ನಾದರೂ ಸೃಷ್ಟಿಸಬಲ್ಲೆ ಎಂಬ ವಿಶ್ವಾಸ ಬೆಳೆಯುವುದು ಸಾಧ್ಯವಾಯಿತು. ಮಾನವ ಶಾಸ್ತ್ರಜ್ಞರು ಕಲೆಹಾಕಿರುವ ಮಾಹಿತಿಗಳನ್ನು ಗಮನಿಸಿದರೆ ಮಾತೃ ಪೂಜೆಯ ಸಂಗತಿ ಪ್ರಪಂಚದ ಹಲವು ಭಾಗಗಳಲ್ಲಿದ್ದದ್ದು ಕಾಣುತ್ತದೆ. "ತಾಯಿ" ಮನುಷ್ಯನ ಧಾರ್ಮಿಕ ವಿಚಾರಗಳ ಕೇಂದ್ರವಾಗಿದ್ದದ್ದು ಕಾಣುತ್ತದೆ. ಹೀಗಾಗಲು ಹೆಣ್ಣಿಗೆ ಸಹಜ ಸೃಷ್ಟಿಯ ಸಾಮರ್ಥ್ಯ ಇದೆ ಎಂಬುದು ಮುಖ್ಯಕಾರಣ.

ಬೆಬಿಲೋನಿಯಾ ದೇಶದ ಈ ಪುರಾಣಕತೆಯನ್ನು ನೋಡಿ : ಥೈಮಾಟ್ ಎಂಬುವಳು ಮಾತೃದೇವತೆ. ಇಡೀ ವಿಶ್ವದ ಒಡತಿ. ಅವಳ ಗಂಡು ಮಕ್ಕಳು ದಂಗೆಯೆದ್ದು ತಾವೇ ರಾಜರಾಗಲು ಯೋಚಿಸಿದರು, ಈ ಯುದ್ಧದಲ್ಲಿ ನಾಯಕನಾಗುವವನು ಮಾತೃದೇವತೆಯಷ್ಟೇ ಬಲಶಾಲಿಯಾಗಿರಬೇಕಾಗಿತ್ತು. ಮಾರ್ಡುಕ್ ಎಂಬ ಮಗನನ್ನು ಆರಿಸಿದರು. ಅವನಿಗೆ ಒಂದು ಪರೀಕ್ಷೆಯನ್ನು ಒಡ್ಡಿದರು. ಮಾರ್ಡುಕ್ ತನ್ನ "ಬಾಯಿಯ ಬಲದಿಂದ" ಒಂದು ಬಟ್ಟೆಯ ಚೂರನ್ನು ಮಾಯವಾಗುವಂತೆ ಮಾಡಿ, ಮತ್ತೆ "ಒಂದು ಮಾತಿನಿಂದ" ಅದು ಪ್ರತ್ಯಕ್ಷವಾಗುವಂತೆ ಮಾಡಬೇಕಾಗಿತ್ತು. ಮಾರ್ಡುಕ್ ಆ ಕೆಲಸ ಮಾಡಿದ ನಾಯಕನಾದ. ಮಾತೃದೇವತೆಯನ್ನು ಸೋಲಿಸಿ ಅವಳ ದೇಹದಿಂದ ಭೂಮಿಯನ್ನೂ ಆಕಾಶವನ್ನೂ ಸೃಷ್ಟಿಮಾಡಿದ.

ಈ ಪರೀಕ್ಷೆಯ ಅರ್ಥವೇನು ? ನಾಯಕನಾಗುವ ಮಗ (ಗಂಡು) ತಾಯಿಗೆ (ಹೆಣ್ಣಿಗೆ) ಸಮಾನವಾಗಬೇಕು. ಅವಳಷ್ಟೆ ಬಲವಂತನಾಗಬೇಕು. ತನ್ನ ಸೃಷ್ಟಿಶಕ್ತಿಯಿಂದಲೇ ಹೆಣ್ಣು ಬಲಶಾಲಿಯಾಗಿರುವುದು. ಇದರ ಜೊತೆಗೆ ವಿನಾಶ ಮಾಡು

ವುದು ಗಂಡಿನ ಸಾಮರ್ಥ್ಯ. ವಿನಾಶವನ್ನೂ ಅವನು ಮಾಡಬೇಕು. ವಿನಾಶದ ಮುಖಾಂತರವೇ ಮನುಷ್ಯ ಪ್ರಕೃತಿಯನ್ನು ಗೆದ್ದಿದ್ದು. ಈ ಕತೆಯನಾಯಕ ಮೊದಲು ವಸ್ತುವೊಂದನ್ನು ಇಲ್ಲವಾಗಿಸಿ, ಅಂದರೆ ನಾಶ ಮಾಡಿ, ಮತ್ತೆ ಸೃಷ್ಟಿಸುತ್ತಾನೆ. ಆದರೆ ಈ ಸೃಷ್ಟಿ ಹೆಣ್ಣು ಮಾಡುವ ಸೃಷ್ಟಿಯಂತೆ ತನ್ನ ಒಡಲಿನಿಂದಲೇ ಮೂಡಿದ ಸೃಷ್ಟಿಯಲ್ಲ. ಸಹಜ ಸೃಷ್ಟಿ ಕ್ರಿಯೆಯ ಸ್ಥಾನವನು ಇಲ್ಲಿ ಆಲೋಚನೆಯ ಮಾಟ, ಮಾತಿನ ಮಂತ್ರ ಶಕ್ತಿ ಆಕ್ರಮಿಸಿವೆ.

ಬೆಬಿಲೋನಿಯಾದ ಎಲ್ಲಿಗೆ ಕೊನೆಗೊಳ್ಳುತ್ತದೋ ಅಲ್ಲಿಂದ ಬೈಬಲ್ಲಿನ ಸೃಷ್ಟಿ ಪುರಾಣ ಆರಂಭವಾಗುತ್ತದೆ. ಬೈಬಲ್ಲಿನ ಕಾಲದ ಹೊತ್ತಿಗೆ ಹೆಣ್ಣು ದೇವತೆಯ ಎಲ್ಲ ಮೇಲ್ಮೆಯನ್ನು ಕಿತ್ತುಕೊಳ್ಳಲಾಗಿತ್ತು. ಸೃಷ್ಟಿ ದೇವರ "ಮಾತಿ"ನಿಂದ, ಮಾತಿನ ಮಾಟದಿಂದ ಆರಂಭವಾಗುತ್ತದೆ, ಬೈಬಲ್ಲಿನ ಕತೆಯಲ್ಲಿ ಹೆಣ್ಣಿನಿಂದ ಗಂಡು ಹುಟ್ಟುವುದಿಲ್ಲ. ಬದಲಾಗಿ ಗಂಡಿನ ದೇಹದಿಂದ ಹೆಣ್ಣಿನ ಸೃಷ್ಟಿಯಾಗುತ್ತದೆ. ಹೆಣ್ಣನ್ನು ಗಂಡು ಸೋಲಿಸಿದ ಕಥನ ಬೈಬಲ್ಲಿನ ಸೃಷ್ಟಿ ವಿವರಗಳಲ್ಲಿದೆ.

ಅಂದರೆ, ಈ ಐತಿಹಾಸಿಕ ಮತ್ತು ಪೌರಾಣಿಕ ವಿವರಗಳು ಒಂದು ಅಂಶವನ್ನು ಸ್ಪಷ್ಟಮಾಡುತ್ತವೆ. ಹೆಣ್ಣಿನ ಹಿರಿಮೆಯನ್ನು ಒಪ್ಪಿದ್ದ ಮನುಷ್ಯ ಕುಲವು, ಕ್ರಮೇಣ, ತಾಂತ್ರಿಕ ಉತ್ಪಾದನಾ ವಿಧಾನಗಳು ಬೆಳೆದಂತೆ, ಹೆಣ್ಣನ್ನು ತುಳಿದು ಗಂಡಿನ ಮೇಲ್ಮೆಯನ್ನು ಸ್ಥಾಪಿಸಿತು. ಈ ಆಧುನಿಕ ಯುಗದಲ್ಲೂ ಗಂಡಿನ ಮನಸ್ಸಿನ ಆಳದಲ್ಲಿ ಎಲ್ಲೋ ಗುಟ್ಟಾಗಿ ಹೆಣ್ಣಿಗಿರುವ ಸೃಷ್ಟಿ ಸಾಮರ್ಥ್ಯದ ಬಗ್ಗೆ ಭಯ ಉಳಿದುಕೊಂಡಿದೆ, ಹೆಣ್ಣಿನ ಮನಸ್ಸಿನ ಆಳದಲ್ಲಿ ಗಂಡು 'ಬಂಜೆ'ಯಾದ್ದರಿಂದ ತಾನು ಮೇಲು ಎಂಬ ಭಾವ ಉಳಿದುಕೊಂಡಿದೆ.

ಹೀಗೆ ಲಿಂಗ ವ್ಯತ್ಯಾಸದಿಂದಾಗಿ ಗಂಡು ಹೆಣ್ಣುಗಳ ವಕ್ತಿತ್ವಕ್ಕೆ ಸಾಮಾನ್ಯವಾಗಿ ಒಂದು ಬಣ್ಣ ಬರುತ್ತದಯೆಂದರೂ ಪ್ರತಿಯೊಬ್ಬ ವ್ಯಕ್ತಿಗೂ ಇದು ಅನ್ವಯವಾಗುತ್ತದೆ ಎಂದಲ್ಲ. ವೈಯುಕ್ತಿಕ ವೈಚಿತ್ರ್ಯಗಳು ಇದ್ದೇ ಇರುತ್ತವೆ. ಈ ಸಹಜ ವ್ಯತ್ಯಾಸಗಳು ನಿರ್ದಿಷ್ಟ ಸಾಂಸ್ಕೃತಿಕ ಹಿನ್ನೆಲೆಯೊಂದಿಗೆ ಬೆರೆತಿರುತ್ತವೆ. ಉದಾಹರಣೆಗೆ, ಗಂಡಿನ ಸ್ಪರ್ಧಾ ಮನೋಭಾವ, ಹೆಣ್ಣಿನ ಆಶ್ರಿತ ಮನೋಭಾವ—ಇವು ಸಾಮಾಜಿಕ ಸಾಂಸ್ಕೃತಿಕ ಕಾರಣಗಳಿಂದಲೂ ನಿರ್ಧಾರಿತವಾಗಬಹುದು. ಸ್ಪರ್ಧೆ ಮತ್ತು ಆಶ್ರಿತ ಭಾವನೆ ಸಾಂಸ್ಕೃತಿಕ ಕಾರಣದಿಂದ ಉಂಟಾದದ್ದಾಗಿದ್ದರೆ ಆಗ ವ್ಯಕ್ತಿಯ ಇಡೀ ವ್ಯಕ್ತಿತ್ವ ಅತನಿಗೆ ಇರುವ ಅನೇಕ ಸಾಧ್ಯತೆಗಳಲ್ಲಿ ಕೇವಲ ಒಂದು ಅಂಶಕ್ಕಷ್ಟೇ ಸಂಕುಚಿತಗೊಂಡುಬಿಡುತ್ತದೆ. ಸಹಜ ದೈಹಿಕ ವ್ಯತ್ಯಾಸಗಳು ಹೀಗೆ ವ್ಯಕ್ತಿತ್ವವನ್ನು ಕುಗ್ಗಿಸುವುದಿಲ್ಲ. ಯಾಕೆಂದರೆ ಸಹಜ ವ್ಯತ್ಯಾಸಗಳ ಹಿಂದೆ ಆಳವಾದ ಸಮಾನತೆಯ ಅಂಶವಿದೆ. ಗಂಡು ಮತ್ತು



ಶೂದ್ರ

ಹೆಣ್ಣು ತಮ್ಮ ಎಲ್ಲ ಸಹಜ ವ್ಯತ್ಯಾಸಗಳೊಂದಿಗೆ 'ಮನುಷ್ಯರಾಗಿದ್ದಾರೆ' ಎಂಬುದೇ ಆ ಸಮಾನ ಅಂಶ. ಗಂಡು ಹೆಣ್ಣುಗಳಿಬ್ಬರಿಗೂ ಸಮಾನವಾದ ಸಾಮರ್ಥ್ಯಗಳಿವೆ, ಸಮಾನ ಆಸೆಗಳಿವೆ. ಸಮಾನ ಭಯಗಳಿವೆ. ವ್ಯತ್ಯಾಸಗಳು ಅವರನ್ನ ಸಂಪೂರ್ಣ ಬೇರೆ-ಬೇರೆ ಮಾಡುವುದಿಲ್ಲ. ಯಾವುದೇ ಸಮಾಜದಲ್ಲಿ ಕೇವಲ ದೈಹಿಕ ವ್ಯತ್ಯಾಸಗಳ ಆಧಾರದ ಮೇಲೆ ಹೆಣ್ಣು ಮತ್ತು ಗಂಡಿಗೆ ಬೇರೆ ಬೇರೆಯ ಸ್ಥಾನಮಾನಗಳನ್ನು ಕಲ್ಪಿಸು ವುದಕ್ಕೆ ಯಾವ ಆಧಾರವೂ ಇಲ್ಲ. ಗಂಡು-ಹೆಣ್ಣುಗಳಲ್ಲಿ ಸಹಜವಾಗಿ, ದೈಹಿಕಕಾರಣ ದಿಂದ ಕಾಣುವ ವ್ಯತ್ಯಾಸ, ಸ್ವಭಾವದ ಎಳೆ, ತನ್ನಷ್ಟಕ್ಕೇ ಒಳ್ಳೆಯದೂ ಅಲ್ಲ. ಕೆಟ್ಟದ್ದೂ ಅಲ್ಲ. ನಿರ್ದಿಷ್ಟ ಸನ್ನಿವೇಶದಲ್ಲಿ, ನಿರ್ದಿಷ್ಟ ಹಿನ್ನೆಲೆಯ ವ್ಯಕ್ತಿಯಲ್ಲಿ ಈ ಸಹಜ ಸ್ವಭಾವ ಒಳ್ಳೆಯದೂ ಆಗಬಹುದು, ಕೆಟ್ಟದ್ದೂ ಆಗಬಹುದು. ಉದಾಹರಣೆಗೆ. ಸೋಲುತ್ತೇ ನೆಂಬ ಭಯ ತಾಳಬಹುದಾದ ಕೆಟ್ಟರೂಪಗಳೆಂದರೆ, ಒಣ ಜಂಬ, ನಂಬಿಕೆಗೆ ಅನರ್ಹ ವಾಗುವುದು, ಗಾಂಭೀರ್ಯ ಕಳೆದುಕೊಳ್ಳುವುದು ಇತ್ಯಾದಿ. ಆದರೆ ಇದೇ ಸೋಲುವ ಭಯದಿಂದ ಪ್ರೇರಿತವಾಗಿ ಮುನ್ನುಗ್ಗುವ, ಸದಾ ಚಟುವಟಿಕೆಯ, ಧೈರ್ಯದ ವ್ಯಕ್ತಿಯೂ ಆಗಬಹುದು. ಹೆಣ್ಣು ತನ್ನ ವಿಶಿಷ್ಟ ಸ್ವಭಾವದಿಂದ, ಸಾಮಾನ್ಯವಾಗಿ, ಹೇಗೆ ಕಾಣ್ತಾಳೆ ? ಬೌದ್ಧಿಕವಾಗಿ, ಭಾವನಾತ್ಮಕವಾಗಿ, ಲೌಕಿಕವಾಗಿ ತನ್ನ ಕಾಲ ಮೇಲೆ ತಾನು ನಿಲ್ಲಲಾರದ ಅಸಮರ್ಥಳಾಗಿದ್ದಾಳೆ ಅನ್ನಿಸುತ್ತದೆಯೇ. ಆದರೆ, ಹೆಣ್ಣಿನ ಬೆಳವಣಿಗೆಗೆ ಸೂಕ್ತ ಸಂದರ್ಭ ದೊರೆತರೆ ಅವಳು ತಾಳ್ಮೆ, ನಂಬಿಕೆ ಮತ್ತು ತೀವ್ರ ಪ್ರೇಮಗಳ ಮೂರ್ತರೂಪವೂ ಆಗಬಹುದು. ಅಂದರೆ, ಗಂಡು ಮತ್ತು ಹೆಣ್ಣು, ಅವರು ಏನಾಗಿದ್ದಾರೆ ಎಂಬುದನ್ನು, ಅವರ 'ಗಂಡುತನ' ಮತ್ತು 'ಹೆಣ್ಣುತನ'ಗಳು ಅವರ ವ್ಯಕ್ತಿತ್ವದ ಉತ್ತಮಿಕೆಗೆ ಅಥವ ಸಾಮಾನ್ಯತೆಗೆ ಎಷ್ಟು ಮಟ್ಟಿಗೆ ಕಾರಣವಾಗಿದೆ ಎಂಬುದನ್ನು, ಅವರವರ ಇಡೀ ವ್ಯಕ್ತಿತ್ವದ ವಿನ್ಯಾಸದ ಹಿನ್ನೆಲೆಯಲ್ಲಿಯೇ ಅರಿಯಬೇಕು. ಗಂಡು ಗಂಡಾಗಿರುವ ಮಾತ್ರಕ್ಕೆ, ಹೆಣ್ಣು ಹೆಣ್ಣಾಗಿರುವ ಮಾತ್ರಕ್ಕೆ ಒಬ್ಬರು ಉತ್ತಮರು ಮತ್ತೊಬ್ಬರು ಅಧಮರು ಎಂದು ಹೇಳಬಾರದು.

Sex and Character

ಡಾಗ್ಮಾ ಆಫ್ ಕ್ರೈಸ್ಟ್ ಪುಸ್ತಕದಿಂದ

●

ಫ್ರಾಮ್‌ರವರ ವಿಚಾರಗಳ ಮತ್ತೊಂದು ಭಾಗವನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು. ನಮ್ಮಲ್ಲಿಯ ಪ್ರಜ್ಞಾವಂತ ಚಿಂತಕರಾದ ಓ.ಎಲ್.ನಾಗಭೂಷಣ ಸ್ವಾಮಿಯವರು ಈ ಲೇಖನ ಮಾಲೆಗೆ ಸಹಕರಿಸುತ್ತಿರುವುದಕ್ಕೆ ಶೂದ್ರ ಋಣಿಯಾಗಿದೆ. ಸಂ :

# ಸಾಹಿತ್ಯದಲ್ಲಿ ಬದ್ಧತೆ

—ಬರಗೂರು ರಾಮಚಂದ್ರಪ್ಪ

"ಕಲಾಕಾರ ತನ್ನ ಸಾಮಾಜಿಕ ಪರಿಸರದೊಂದಿಗೆ ಸಂಬಂಧ ಸ್ಥಾಪಿಸಿಕೊಳ್ಳದ ಕಡೆ 'ಕಲೆಗಾಗಿ ಕಲೆ'ಯೆಂಬ ನಂಬಿಕೆ ಹುಟ್ಟುತ್ತದೆ" ಎನ್ನುತ್ತಾನೆ ಪ್ಲೆಖನೋವ್. ಈ ಮಾತು ಕಲೆ ಮತ್ತು ಸಮಾಜದ ಸಂಬಂಧವನ್ನು ಸೂಚಿಸುತ್ತ, ಕಲೆಯಾಗುವುದೇ ಕಲೆಯ ಕೆಲಸವಲ್ಲ, ಬೇರೆ ಕೆಲಸವೂ ಇದೆಯೆಂಬ ಹೊಳಹನ್ನು ಕೊಡುತ್ತದೆ. ಯಾಕೆಂದರೆ ಸಾಮಾಜಿಕ ಪರಿಸರಕ್ಕೆ ವಿರೋಧಿಯಾದವನು ಮಾತ್ರ ಕಲೆಗಾಗಿ ಕಲೆಯೆಂದು ನಂಬುತ್ತಾನೆಂದು ಪ್ಲೆಖನೋವ್ ವಿಚಾರ. ಅಂದರೆ, "ಕಲೆಗಾಗಿ ಕಲೆ" ಎಂಬ ನಂಬಿಕೆ ನಮ್ಮನ್ನು ಸಾಮಾಜಿಕ ಪರಿಸರದಿಂದ ವಂಚಿಸುತ್ತದೆ. ತನ್ಮೂಲಕ ತನ್ನೊಳಗೆ ತಾನು ಹೂತುಹೋಗುವ ಕಲಾಕಾರನನ್ನು ಸೃಷ್ಟಿಸುತ್ತದೆ. ಹೀಗಾಗದಿರಬೇಕಾದರೆ ಕಲಾಸೃಷ್ಟಿಯಲ್ಲಿ ಪ್ರಜ್ಞೆಯ ಪಾತ್ರವೂ ಮುಖ್ಯ. ಈ ಪ್ರಜ್ಞೆ ಬದುಕನ್ನು ಪರಿಭಾವಿಸುವ ಪ್ರಕ್ರಿಯೆಯಲ್ಲಿ ಮತ್ತು ಅದನ್ನು ಅಭಿವ್ಯಕ್ತಿಸುವ ವಿಧಾನದಲ್ಲಿ ರೂಪುಗೊಳ್ಳುತ್ತದೆ. ಈ ಮುಖಾಂತರ ಬದುಕಿನ ಬಗ್ಗೆ, ಜಗತ್ತಿನ ಬಗ್ಗೆ ಧೋರಣೆಯೊಂದು ಖಚಿತಗೊಳ್ಳುತ್ತದೆ. ಜಗತ್ತಿನ ಬಗ್ಗೆ ಪ್ರಜ್ಞಾಪೂರ್ವಕ ಅಥವಾ ಅಪ್ರಜ್ಞಾಪೂರ್ವಕವಾಗಿ ಇರುವ ಧೋರಣೆಯ ಫಲ-ಸಾಹಿತ್ಯ" ಎಂಬ ಸಾರ್ತ್ರನ ಮಾತನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು.

ವ್ಯಕ್ತಿ ತನ್ನ ಸ್ಥಾನ ಮತ್ತು ಇತರರನ್ನು ಕುರಿತಂತೆ ತನ್ನ ಜವಾಬ್ದಾರಿಯನ್ನು ಯೋಚಿಸಿಕೊಳ್ಳತೊಡಗಿದಾಗ ಬದ್ಧತೆಯ ಅನಿವಾರ್ಯತೆ ಹುಟ್ಟುತ್ತದೆಯೆಂದು ಮ್ಯಾಕ್ಸ್ ಅಡೆರೆತ್ ಹೇಳುತ್ತಾನೆ. ಯಾವಾಗ ಕಲೆಗಾಗಿಯೇ ಕಲೆ ಸೃಷ್ಟಿಯಾಗುವುದಿಲ್ಲವೋ ಆಗ ಕಲೆ ಅಥವಾ ಸಾಹಿತ್ಯಕ್ಕೆ ಒಂದು ಹೊಣೆಗಾರಿಕೆ ಲಭ್ಯವಾಗುತ್ತದೆ. ಕಲೆಗಾಗಿ ಕಲೆಯೆನ್ನುವುದು ಹೊಣೆಗೇಡಿತನದ ಒಂದು ಉದಾಹರಣೆ. ಕಲೆ ಅಥವಾ ಸಾಹಿತ್ಯದ ಸೃಷ್ಟಿಕ್ರಿಯೆ, ಸಾಮಾಜಿಕ ಬದುಕಿನ ದ್ರವ್ಯವನ್ನು ಬಳಸಿಕೊಳ್ಳುವುದರಿಂದ ಅದು ಈ ಬದುಕಿಗೆ ಹೊಣೆಯಾಗುತ್ತದೆ; ಹೀಗಾಗಿ ಹೊಣೆಗಾರಿಕೆ ಎನ್ನುವುದು ಕಲೆ-ಸಾಹಿತ್ಯದ ಅವಿಭಾಜ್ಯ ಅಂಗವಾಗುತ್ತದೆ. ಇಷ್ಟಾದರೂ ಹೊಣೆಗಾರಿಕೆಯ ಅಸ್ತಿತ್ವವನ್ನು ಒಪ್ಪದವರು ಬೂರ್ಶ್ವಾ ಸಮಾಜ 'ಸೃಷ್ಟಿಸಿದ' ಸ್ವೈರ ಸ್ವಾತಂತ್ರ್ಯದ

---

ಬರಗೂರು ರಾಮಚಂದ್ರಪ್ಪ, ಕನ್ನಡ ವಿಭಾಗ, ಜ್ಞಾನಭಾರತಿ, ಬೆಂಗಳೂರು-560 056

ಕಲ್ಪನೆಯಲ್ಲಿ, ಎಲ್ಲವನ್ನೂ ಮೀರಿನಿಂತ ಸ್ವತಂತ್ರರೆಂಬ ಭ್ರಮೆಯಲ್ಲಿ ಮುಳುಗಿ ಹೋಗಿರುತ್ತಾರೆ. ಇಂಥವರಿಗೆ ಬೂರ್ಶ್ವಾ ಸಮಾಜದಲ್ಲಿ ಸದಾ ಸ್ವಾತಂತ್ರ್ಯದ ಮಾತೇ ಹೆಚ್ಚಾಗಿದ್ದರೂ ಅದು ತನ್ನೆಲ್ಲ ವಿಸ್ತಾರದೊಂದಿದೆ ಅಸ್ತಿತ್ವದಲ್ಲಿರುವುದಿಲ್ಲ ಎಂಬ ಅರಿವಾಗುವುದಿಲ್ಲ. "ಬೂರ್ಶ್ವಾಗಳಿಗೆ ಸ್ವಾತಂತ್ರ್ಯವೆಂಬುದು ಅನಿವಾರ್ಯ ಪ್ರಜ್ಞೆಯಾಗಿರದೆ ಅದರ ಬಗೆಗಿನ ಅಜ್ಞಾನವಾಗಿರುತ್ತದೆ"—(To the bourgeois freedom is not the consciousness of necessity, but the ignorance of it.) ಎಂಬ ಕ್ರಿಸ್ಟಾಫರ್ ಕಾಡ್‌ವೆಲ್‌ನ ಮಾತು ಇಲ್ಲಿ ಮನನೀಯ.

ಸೃಷ್ಟಿಕ್ರಿಯೆಯಲ್ಲಿ ಹೊಣೆಗಾರಿಕೆಯ ಅಂಶವಿರುವುದರಿಂದ ಆತ ಪ್ರಜ್ಞಾಪೂರ್ವಕವಾಗಿಯೊ ಅಪ್ರಜ್ಞಾಪೂರ್ವಕವಾಗಿಯೋ ಬದ್ಧನಾಗಿರುವುದು ಅನಿವಾರ್ಯ. ಸಾಹಿತ್ಯ ಕೇವಲ ಖುಷಿಗಾಗಿ ಅಲ್ಲವೆಂದಾದ ಮೇಲೆ ಅದು ತನ್ನಲ್ಲಿ ಮತ್ತು ಇತರರಲ್ಲಿ ಉಂಟುಮಾಡುವ ಪರಿಣಾಮವೂ ಸೃಜನಶೀಲ ಪ್ರಕ್ರಿಯೆಯ ಭಾಗವಾಗುತ್ತದೆ. ಆಗ ತನ್ಮಯತೆ ಮತ್ತು ಪ್ರಜ್ಞಾ ಸ್ಥಿತಿಗಳ ತಿಕ್ಕಾಟದಲ್ಲಿ ಸಾಹಿತ್ಯ ರೂಪುಗೊಳ್ಳುತ್ತದೆ. ತಾನು ಹೊರಡಿಸುವ ಧ್ವನಿಯಲ್ಲಿ, ವ್ಯಾಖ್ಯಾನಿಸುವ ವಿಧಾನದಲ್ಲಿ ರೂಪಿಸುವ ಬಂಧ ಕ್ರಮದಲ್ಲಿ ಈ ಬದ್ಧರೂಪ ಅಡಕವಾಗಿರುತ್ತದೆ. ಆದ್ದರಿಂದ ಸಾಹಿತ್ಯದಲ್ಲಿ ಬದ್ಧತೆಯಿದ್ದರೆ ಸಾಹಿತಿಯ ಸೃಜನಶೀಲ ಸ್ವಾತಂತ್ರ್ಯಕ್ಕೆ ಧಕ್ಕೆಯುಂಟಾಗುತ್ತದೆಯೆಂಬ ಭಾವನೆಗೆ ಬೇರುಗಳಿಲ್ಲ. ಮಾರ್ಕ್ಸ್ ಅಡರಶ್ ಹೇಳುವಂತೆ "ಆಧುನಿಕ ಪರಿಕಲ್ಪನೆಯಾದ ಬದ್ಧತೆಯ ಮಹತ್ವಪೂರ್ಣ ಮೂಲ ಸತ್ವವೆಂದರೆ, ಅದು ಸಾಹಿತ್ಯದ ಅವಿಭಾಜ್ಯ ಅಂಗವಾಗಿರುವುದೇ ಆಗಿದೆ." ಸಾಹಿತಿ ಸಮಾಜದಿಂದ ಸ್ವಾತಂತ್ರ್ಯವನ್ನು ಬಯಸಿದರೆ, ಸಮಾಜ ಸಾಹಿತಿಯಿಂದ ಸಾಮಾಜಿಕ ಹೊಣೆಗಾರಿಕೆಯನ್ನು ಬಯಸುವುದರಿಂದ ಹುಟ್ಟುವ ವೈರುಧ್ಯಕ್ಕೆ ಉತ್ತರಕ್ಕೆ ಮ್ಯಾಕ್ಸ್ ಅಡೆರೆತ್ ಕೊಡುವ ಸ್ಪಷ್ಟ ಉತ್ತರ— "ಸಾಹಿತಿಯ ಸೃಷ್ಟಿ ಸ್ವಾತಂತ್ರ್ಯ ಸಾಮಾಜಿಕ ಜವಾಬ್ದಾರಿಯ ವಿವೇಕದಿಂದ ಹೊರತಾದದ್ದಲ್ಲ"- ಎಂಬುದು ಈ ಹಿನ್ನೆಲೆಯಲ್ಲೇ ಸಾಹಿತ್ಯ ಬದ್ಧತೆಯಿಂದಲೂ ಹೊರತಾದದ್ದಲ್ಲ ಎನ್ನಬಹುದು.

ಇಂದು ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಬದ್ಧತೆಯ ಮಾತನ್ನು ಹೆಚ್ಚು ಆಡುತ್ತಿರುವವರು ಬಂಡಾಯ ಸಾಹಿತಿಗಳಾದ್ದರಿಂದಲೇ ಕೆಲವರಿಗೆ ಇದು ಅಪಥ್ಯವಾಗಿರುವಂತಿದೆ. ಬಹಳ ವರ್ಷಗಳ ಹಿಂದೆ ಕೀರ್ತಿನಾಥ ಕುರ್ತಕೋಟಿಯವರು ಹೇಳಿದ ಮಾತುಗಳನ್ನಿಲ್ಲಿ ಈಗ ನೋಡೋಣ. ೧೯೬೩ರಲ್ಲಿ 'ಮನ್ವಂತರ'ದ ಎರಡನೇ ಸಂಚಿಕೆಯಲ್ಲಿ ಕುರ್ತಕೋಟಿಯವರು "ಒಳಿತು-ಕೆಡುಕು, ಸರಿ-ತಪ್ಪು, ಜ್ಞಾನ-ಅಜ್ಞಾನ, ನ್ಯಾಯ-ಅನ್ಯಾಯ, ಕತ್ತಲೆ-ಬೆಳಕು — ಹೀಗೆ ಎಷ್ಟೋ ದ್ವಂದ್ವಗಳ ಇಕ್ಕಟ್ಟಿನಲ್ಲಿ ವಿವೇಕದ ದಾರಿಯನ್ನು ಹುಡುಕುವುದು ಬಹಳ ಕಷ್ಟ" ಎಂದು ವಿವರಿಸುತ್ತಾ "ಈ

ಬಗೆಯ ಸಂದರ್ಭದಲ್ಲಿ ಜೀವನದಲ್ಲಿ ಹೇಗೋ ಹಾಗೆ ಕಾವ್ಯದಲ್ಲಿ ಕೂಡ ಒಂದು ನಿಷ್ಠೆಯ ಅಗತ್ಯವಿದೆ" ಎಂದು ಪ್ರತಿಪಾದಿಸಿದ್ದಾರೆ. ಇವರು ನಿಷ್ಠೆ, ನಂಬಿಕೆ ಎನ್ನುವುದನ್ನೇ ನಾವು ಬದ್ಧತೆ ಎನ್ನುತ್ತೇವೆ. ನಾವು ಬದ್ಧತೆಯ ಮಾತಾಡಿದರೆ ಸೃಜನಶೀಲ ಸ್ವಾತಂತ್ರ್ಯಕ್ಕೆ ಧಕ್ಕೆ ಬಂದು, ಬೇರೆಯವರು ನಿಷ್ಠೆಯ ಮಾತಾಡಿದರೆ ಈ ಸ್ವಾತಂತ್ರ್ಯದ ಸಂರಕ್ಷಣೆಯಾಗುತ್ತದೆಯೇ ? ಕುರ್ತಕೋಟಿಯವರೇ ಸಾಹಿತ್ಯ ವಿಮರ್ಶೆ ಕುರಿತ ತಮ್ಮ ಇತಿಹಾಸ ಪ್ರಬಂಧದಲ್ಲಿ (ಯುಗಧರ್ಮ ಹಾಗೂ ಸಾಹಿತ್ಯ ದರ್ಶನ) "ಸಾಹಿತ್ಯ ಎಷ್ಟು ಸ್ವಾಂತಃ ಸುಖಾಯ ಎಂದು ಹೇಳಿಕೊಂಡರೂ ಒಂದು ಸಾಮಾಜಿಕ ಜವಾಬ್ದಾರಿಯಾಗಿದೆ" ಎಂದಿದ್ದಾರೆ. ಆದರೆ ಇದೇ ಕುರ್ತಕೋಟಿಯವರು 'ಬೇಂದ್ರೆಯವರಲ್ಲಿ ಸಾಮಾಜಿಕ ಪ್ರಜ್ಞೆ' ಕುರಿತು ನಮ್ಮಂಥವರು ಬರೆಯ ಹೊರಟಾಗ ತಾಳ್ಮೆ ಕಳೆದುಕೊಳ್ಳುತ್ತಾರೆ. (ಪ್ರಜಾವಾಣಿಯಲ್ಲಿ ಬಂದ 'ಕವಿ ಬೇಂದ್ರೆ' ಕೃತಿ ವಿಮರ್ಶೆಯಲ್ಲಿ) ನಾನಿಲ್ಲಿ ಕುರ್ತಕೋಟಿಯವರನ್ನು ಉದಾಹರಿಸುತ್ತಿರುವುದು ಖಂಡಿತ ವೈಯಕ್ತಿಕ ಕಾರಣಕ್ಕಲ್ಲ; ಕನ್ನಡದ ವಿಮರ್ಶಾ ವಿಧಾನವೊಂದರ ಪ್ರಬುದ್ಧ ಪ್ರತಿನಿಧಿ ಎಂಬ ಕಾರಣಕ್ಕಾಗಿ.

ಮೇಲಿನ ಉಲ್ಲೇಖನಗಳಿಂದ ವ್ಯಕ್ತವಾಗುವುದು ಇಷ್ಟು : ಹಿಂದಿನಿಂದಲೂ ಸಾಹಿತ್ಯದ ಸಾಮಾಜಿಕ ಜವಾಬ್ದಾರಿಯ ಬಗ್ಗೆ ಮತ್ತು ಸಾಹಿತ್ಯದ ನಿಷ್ಠೆ ಬದ್ಧತೆಗಳ ಬಗ್ಗೆ ಒಪ್ಪಿಕೊಳ್ಳಲಾಗಿದೆ. ಆದರೆ ಈಗ ಈ ಪರಿಕಲ್ಪನೆಗಳು ಸಮಾಜ ಬದಲಾವಣೆಯ ಹಿನ್ನಲೆಯಲ್ಲಿ ಪ್ರತಿಪಾದಿತವಾಗುತ್ತಿರುವುದರಿಂದ ಯಥಾಸ್ಥಿತಿವಾದೀ ಮನಸ್ಸುಗಳಿಗೆ ಆತಂಕವಾಗಿ 'ಸೃಜನಶೀಲ ಸ್ವಾತಂತ್ರ್ಯದ'ದ ಪ್ರೇಮ ಪ್ರಕಟವಾಗುತ್ತಿದೆ. ಯಥಾಸ್ಥಿತಿಯನ್ನು ಸಂರಕ್ಷಿಸುವ ಸಾಮಾಜಿಕ ಜವಾಬ್ದಾರಿ ಮತ್ತು ಬದ್ಧತೆ ಬೇಕು. ಸಮಾಜ ಬದಲಾವಣೆಯ ಬದ್ಧತೆ ಬೇಡವೆಂಬ ಸರಳ ಸತ್ಯವೇ "ಸಂಕೀರ್ಣ ಸ್ವರೂಪ"ದ ಪೋಜಿನಲ್ಲಿ ಪ್ರಕಟವಾಗುತ್ತಿರುವುದು ನಮ್ಮ ಕಾಲದ ಒಂದು ವೈಚಿತ್ರ್ಯ.

ನನ್ನ ದೃಷ್ಟಿಯಲ್ಲಿ ಬದ್ಧತೆಯೆಂದರೆ ಬದುಕನ್ನು ಕುರಿತ ನಿಲುವು-ದರ್ಶನ. ಆದ್ದರಿಂದ 'ನಾವು ಕೇವಲ ಬದುಕಿಗೆ ಬದ್ಧರು ಬೇರಾವುದಕ್ಕೂ ಅಲ್ಲ' ಎಂದು ಹೇಳುವವರು ಸಾಮಾಜಿಕ ಬದ್ಧತೆಯ ವಿರೋಧದಲ್ಲಿ ಸೃಷ್ಟಿಕ್ರಿಯೆಯ ಸತ್ಯಗಳನ್ನು ಮರೆಮಾಡುತ್ತಾರೆ. ನಿಜ. ನಾವೆಲ್ಲ ಬದುಕಿಗೆ ಬದ್ಧರು : ಬದುಕಿಲ್ಲದೆ ಸಾಹಿತ್ಯವಿಲ್ಲ. ಆದರೆ ಈ ಬದುಕಿನ ಎಲ್ಲವನ್ನೂ ನಮ್ಮ ಸಾಹಿತ್ಯ ಒಳಗೊಳ್ಳುತ್ತದೆಯೆ ? ಬದುಕುತ್ತಲೇ ನಾವು ಅದರ ಬಗೆಗೆ ನಮ್ಮದೇ ನಿಲುವಿಗೆ ತಲುಪುವುದಿಲ್ಲವೇ ?— ಇಂಥ ಪ್ರಶ್ನೆಗಳಿಗೆ ಮುಖಾಮುಖಿಯಾದಾಗ ಅರಿವಾಗುತ್ತದೆ—ಬದುಕಿನಲ್ಲಿರುವ ಎಲ್ಲವನ್ನೂ ಒಪ್ಪುವುದು, ಒಳಗೊಳ್ಳುವುದು ಬೋಳೆತನ ಎಂದು. ಬದುಕಿನ ಎಲ್ಲವನ್ನೂ ಒಪ್ಪುವವನು ಏನನ್ನೂ ಒಪ್ಪಿರುವುದಿಲ್ಲ ; ಏನನ್ನೂ ಒಳಗೊಂಡಿರುವುದಿಲ್ಲ ; ಆದ್ದರಿಂದ

ಏನನ್ನೂ ಸೃಷ್ಟಿಸುವುದಿಲ್ಲ. ಸೃಷ್ಟಿಸುವವನು ಬದುಕಿನ ಒತ್ತಡದಲ್ಲಿ ತನ್ನದೇ ಒಲವು ನಿಲುವುಗಳಿಗೆ ತಲುಪುತ್ತಾ, ಸೃಷ್ಟಿಸುವ ಸಂದರ್ಭದಲ್ಲಿ ಮನಸ್ಸಿನ ಮೂಸೆಯೊಳಗೆ ಮಾತಾಗುತ್ತ, ಮೌಲ್ಯ ಸಂಘರ್ಷಕ್ಕೊಳಗಾಗುತ್ತ, ಒಂದಕ್ಕೊಂದು ಹೆಣೆದುಕೊಳ್ಳುತ್ತ ಸಾಹಿತ್ಯ ಕೃತಿಗಳಾಗುತ್ತವೆ. ಅಂದರೆ ಸೃಷ್ಟಿಕ್ರಿಯೆಯೆಂಬುದು ಬದುಕನ್ನು ಪರಿಶೀಲಿಸುವ ಒಂದು ಸೃಜನಶೀಲ ವಿಧಾನ. ಈ ವಿಧಾನದಲ್ಲಿ ಬದುಕಿನ ಮೌಲ್ಯಕ್ಕೆ ಮುಖವೊಂದು ಲಭ್ಯವಾಗುತ್ತದೆ. ಈ ಮುಖ ಸಾಹಿತಿಯೊಬ್ಬ ಬದುಕಿಗೆ ಮುಖಾಮುಖಿಯಾದದ್ದರ ಪರಿಣಾಮ. ಇದೇ ಬದ್ಧತೆಯ ಪ್ರಕ್ರಿಯೆ ಮತ್ತು ಫಲ. ಬದ್ಧ ಸಾಹಿತ್ಯ ಎನ್ನುವುದು ತತ್ವವೊಂದಕ್ಕೆ ತೊಡಿಸುವ ತೊಡಿಗೆಯಲ್ಲ. ಬದುಕಿನಲ್ಲಿ ತತ್ವವನ್ನು ಕಂಡುಕೊಳ್ಳುವ ಮತ್ತು ತಲುಪುವ ತೀವ್ರತೆಯುಳ್ಳ ಸಹಜ ಕ್ರಿಯೆ.

ಒಟ್ಟಿನಲ್ಲಿ ಹೇಳುವುದಾದರೆ ಸಾಹಿತ್ಯ ಮತ್ತು ಬದ್ಧತೆ ಬೇರೆ ಬೇರೆಯಲ್ಲ. ಇದನ್ನು ಒಪ್ಪಿಕೊಳ್ಳುವ ಆತ್ಮಸ್ಥೈರ್ಯವಿಲ್ಲದವರು "ಸೃಜನಶೀಲ ಸ್ವಾತಂತ್ರ್ಯದ ಸೋಗು' ಹಾಕುತ್ತಾರೆ. ಒಪ್ಪಿಕೊಂಡವರು ಹಾಗೆಂದು ಘೋಷಿಸಿಕೊಂಡೇ ಬರೆಯುತ್ತಾರೆ; ಬದುಕನ್ನು ಗಂಭೀರವಾಗಿ ಪರಿಭಾವಿಸುವ ಎಲ್ಲರಲ್ಲೂ ಪ್ರಜ್ಞಾಪೂರ್ವಕ ಅಥವಾ ಅಪ್ರಜ್ಞಾ ಪೂರ್ವಕವಾಗಿ ಬದ್ಧತೆ ಇರುತ್ತದೆ. ಆದ್ದರಿಂದ ಸಾಹಿತ್ಯ ಕೃತಿಯ ವಿಮರ್ಶೆ ಬದ್ಧತೆಯನ್ನು ಒಳಗೊಳ್ಳುತ್ತದೆ. ●

# ಒಳನೋಟ

## ನಮ್ಮ ಮೇಷ್ಟ್ರು ಬಗ್ಗೆ ಪ್ರತಿಕ್ರಿಯೆ

ಆಗಸ್ಟ್ ತಿಂಗಳ 'ಶೂದ್ರ'ದಲ್ಲಿ ಭರತಾದ್ರಿ (ಆನರ್ಸ್ ಹಾಗೂ ಎಂ.ಎ. ನಲ್ಲಿ ನನ್ನ ಕ್ಲಾಸ್‌ಮೇಟ್) ಚಿದಾನಂದಮೂರ್ತಿಗಳ ಬಗ್ಗೆ ಮಾಡಿರುವ ಆಪಾದನೆಯನ್ನು ಓದಿದಾಗ ನನಗೆ ಆಶ್ಚರ್ಯವೇನೂ ಆಗಲಿಲ್ಲ. ಬದಲಾಗಿ ಇತ್ತೀಚೆಗೆ ಎಲ್ಲ ದಿಕ್ಕುಗಳಿಂದಲೂ ಟೀಕೆಗೊಳಗಾಗುತ್ತಿರುವ ಚಿ.ಮೂ.ಗೆ ಪ್ರಿಯ ಶಿಷ್ಯ ಭರತಾದ್ರಿಯಿಂದಲೂ ಒಂದು ಕೊಡುಗೆ ಎನ್ನಿಸಿತು. ಕನ್ನಡಿಗರ 'ಜೋಭದ್ರಗೇಡಿತನ, ನಿದ್ರಾಪ್ರಿಯತೆ' ಮೊದಲಾದ ದೊಡ್ಡ ದೊಡ್ಡ ಪದಗಳನ್ನು ಉಚ್ಚರಿಸುವ ಭರತನಿಗೆ ತಮ್ಮ ಜೀವಮಾನವನ್ನೇ ಕನ್ನಡಕ್ಕಾಗಿ ಮೀಸಲಿಟ್ಟು ಕೃಶವಾಗಿರುವ ಚಿ.ಮೂ.ಗೆ ಅಂತಹ ಪದಗಳನ್ನು ಉಪಯೋಗಿಸಲು ಹೇಗೆ ಸಾಧ್ಯ ? ತಮ್ಮ ಅಧ್ಯಾಪಕ ವೃತ್ತಿಯ ಅಂತ್ಯದ ದಿನಗಳಲ್ಲಿರುವ ಚಿ.ಮೂ. ಈಗ ಮನೆ ಕಟ್ಟಿಸುತ್ತಿರುವ ವಿಷಯ ತಿಳಿದಿರುವ ಭರತ ಅಥವಾ ಅವನಂತಹ

ಶಿಷ್ಯರು ಪ್ರೀತಿಯ ಗುರುಗಳಿಗೆ ಮನೆಪಾಯ ತೋಡಲು ಕನ್ನಡಿಗರನ್ನ ಒದಗಿಸುವ ಕಾರ್ಯ ಮಾಡಬಹುದಿತ್ತಲ್ಲವೇ ? ಕನ್ನಡಕ್ಕಾಗಿ ಹೋರಾಡುತ್ತಿದ್ದಾರೆ ಅಂದಾಕ್ಷಣ "ಮನೆಪಾಯ ತೋಡಲಿಕ್ಕೂ ಕನ್ನಡಿಗರನ್ನೇ ಆಯ್ದುಕೊಳ್ಳಬೇಕಿತ್ತು" ಎಂಬ ವ್ಯಂಗ್ಯದ ಮಾತನಾಡಿದ ಭರತನಿಗೆ ಚಿ.ಮೂ.ರವರು ಶಮ್ಮ ದಪ್ಪ ಚರ್ಮದ ಬಗ್ಗೆ ಮಾತನಾಡಿದ್ದರೆ ಆ ಮಾತಿನೊಳಗಿರುವ ನೋವು ಭರತನಿಗೆ ಅರ್ಥವಾಗಬೇಕಿತ್ತು.

ಚಿ.ಮೂ.ರವರ ಸಾಮಾಜಿಕ ಕಳಕಳಿ, ಬದುಕಿನ ಬಗೆಗಿನ ಅತೀವ ಶ್ರದ್ಧೆ, ಜೀವ ಪರಧೋರಣೆ ಈ ಮೊದಲಾದ ಪಟ್ಟಿಗೂ ಚಿ.ಮೂ.ರವರ ಕನ್ನಡತನಕ್ಕೂ ಭರತ ಯಾವ ರೀತಿಯಲ್ಲಿ ಸಂಬಂಧ ಕಲ್ಪಿಸುತ್ತಿದ್ದಾನೆ ಎನ್ನುವುದೇ ನನಗೆ ಅರ್ಥವಾಗಲಿಲ್ಲ.

ಈಗ ಹತ್ತನ್ನೊಂದು ವರ್ಷದ ಹಿಂದೆ ಚಿ.ಮೂ, ತಮ್ಮ ತಂದೆಯ ತಿಥಿಯಲ್ಲಿ 'ಕದಂಬಬಾತ್'ನ್ನು ಭಿಕ್ಷುಕರಿಗೆ ನೀಡಿದಾಗ ನಾನೂ ಆ ಕಾರ್ಯದಲ್ಲಿ ಭಾಗಿಯಾಗಿದ್ದೆ. ಆ ಭಿಕ್ಷುಕರಲ್ಲಿ ಬೇಕಾದಷ್ಟು ಜನ ತಮಿಳಿನವರಿಗೆ ಚಿ.ಮೂ. ಉಣಬಡಿಸಿದ್ದನ್ನು ಭರತ ನೆನಪಿನಲ್ಲಿಟ್ಟಿಲ್ಲವೆಂದು ಕಾಣುತ್ತೆ. ಚಿ.ಮೂ. ಕನ್ನಡಕ್ಕಾಗಿ ಆಗಲೂ ದುಡಿಯುತ್ತಿದ್ದರು. ಅಂದಾಕ್ಷಣ ಆ ಭಿಕ್ಷುಕರು ತಮಿಳಿನವರೆಂದು ಅವರಿಗೆ ಅನ್ನದಾನ ಮಾಡಬಾರದಿತ್ತು ಎನ್ನುವುದು ವಿವೇಕವೇ ? ಬಹುಶಃ ಭರತನಿಗೆ ಈಗ ಆ ವಿಚಾರ ನೆನಪಿಗೆ ಬಂದಿದ್ದರೆ ಅದನ್ನೂ ಟೀಕಿಸುತ್ತಿದ್ದನೋ ಏನೋ ?

ಒಬ್ಬ ವಿಚಾರವಂತ, ತನ್ನನ್ನು ಇತರರು ಗುರುತಿಸುವ ಮಟ್ಟಕ್ಕೇರಿದಾಕ್ಷಣ ಇನ್ನೊಬ್ಬ ಹೆಸರಾಂತ ವ್ಯಕ್ತಿಯ ಕುಂದು ಕೊರತೆಗಳನ್ನು ಕಂಡುಹಿಡಿದು ಅವಹೇಳನ ಮಾಡಿ ಆ ಮೂಲಕ ತನ್ನ ವಿಚಾರವಂತಿಕೆಗೆ ಕೊಂಬು ಮೂಡಿಸುವ ಪ್ರಯತ್ನ ಸರಿಯಲ್ಲ ಎನಿಸುತ್ತದೆ. ಕನ್ನಡದ ಬಗ್ಗೆ ಹುಚ್ಚರಾಗಿರುವ ಚಿ.ಮೂ. ರವರಿಂದ ದೊಡ್ಡ ಅಪಾಯ ವಿರುವುದಾದರೆ, ಕನ್ನಡವನ್ನು "ಬೂಸಾ" ಎಂದು (ಆಗ) ಕರೆಯುವ ಭರತನಂತಹವರಿಂದ ಎಂಥ ಅಪಾಯ ಎದುರಾಗಬಹುದು ? ಕೇವಲ ಒಂದು ಕೆಲಸಕ್ಕಾಗಿ ಚಿ.ಮೂವಿನ ಹತ್ತಿರ ಹೋಗಿ ತಾನು ಲಿಂಗಾಯುತರವನೆಂದೂ, ಬ್ರಾಹ್ಮಣರ ಹತ್ತಿರ ಹೋಗಿ ತಾನು ಬ್ರಾಹ್ಮಣನೆಂದೂ, ಹರಿಜನರ ಹತ್ತಿರ ಹೋಗಿ ತಾನು ಹರಿಜನನೆಂದೂ ಹೇಳಿಕೊಂಡು ಅವರ ಕಾಲು ಹಿಡಿಯುವ ಮಟ್ಟದಲ್ಲಿ ಕನ್ನಡಿಗರು ಇರಬೇಕಾದರೆ (ಸಂದರ್ಭಕ್ಕೆ ತಕ್ಕಂತೆ ತಮಿಳು, ತೆಲುಗು, ಹಿಂದಿ ಮಾತಾಡಿ) ಚಿ.ಮೂರವರ ಕನ್ನಡತನದ ಬಗ್ಗೆ ಇಂಥ ಕ್ಷುಲ್ಲಕ ಟೀಕೆಗಳು ಬರುವುದು ಅನಿವಾರ್ಯ. ಕಡೆಯದಾಗಿ ಚಿ.ಮೂ.ರಂತಹವರು ಕನ್ನಡರಂಗದಿಂದ ಮರೆಯಾದರೆ ಭರತನಂತಹವರು ಆಕಾಶವಾಣಿಯಲ್ಲಿ ತಮಿಳಿನಲ್ಲಿ ಮಾತನಾಡುವ ದಿನ ದೂರವಿಲ್ಲ.

ಚಿಕ್ಕಮಗಳೂರು. ಎ. ಜಿ. ವಿಶ್ವನಾಥ್

## ಚಿತ್ತಾಲರ ಒಂದು ಪತ್ರ

ಪ್ರೀತಿಯ ಶ್ರೀನಿವಾಸ್,

ನಾನು ಅಮೇರಿಕೆಯಿಂದ ಹಿಂದಿರುಗಿ ಬಂದ ಮೇಲೆ (ಆಗಸ್ಟ್ ೧ರಂದು) ಓದಿದ ಮೊಟ್ಟ ಮೊದಲಿನ ಕನ್ನಡ ಪುಸ್ತಕ ನಿಮ್ಮ "ಕನಸಿಗೊಂದು ಕಣ್ಣು". ಆಗೀಗ ಕೆಲವು ಲೇಖನಗಳನ್ನು ಬಿಡಿಯಾಗಿ ಓದಿದ್ದೆನಾದರೂ ಅವುಗಳ ಸಾಹಿತ್ಯಿಕ ಮಹತ್ವವನ್ನು ಗ್ರಹಿಸಿರಲಿಲ್ಲ. ಪುಸ್ತಕ ರೂಪದಲ್ಲಿ ಇವು ಮಾಡಿದ ಪರಿಣಾಮ ಮಾತ್ರ ಬೇರೆಯೇ: ಇದೊಂದು ಅಸಾಧಾರಣ ಕೃತಿ. ನಾವೆಲ್ಲ ಲಕ್ಷ್ಯಕ್ಕೆ ತಂದುಕೊಳ್ಳುವ ಮೊದಲೇ ಹೊಸ ಸಾಹಿತ್ಯ ಪ್ರಕಾರವೊಂದನ್ನು ಸೃಷ್ಟಿಸಿಬಿಟ್ಟಿದ್ದೀರಿ. ಈ ಪ್ರಕಾರದಲ್ಲಿ ನೀವು ಸಾಧಿಸಿಕೊಂಡ ಶಕ್ತಿಗೆ ಇತ್ತೀಚಿನ "ಶೂದ್ರ"ದಲ್ಲಿ ಪ್ರಕಟಗೊಂಡ— 'ಒಂದು ಸಂತಾಪ ಸೂಚಕ ಪತ್ರ' ಸಮರ್ಥ ಉದಾಹರಣೆ. ಸಾವಿನ ಎದುರಿನಲ್ಲೂ ಬದುಕುವ ಲವಲವಿಕೆಯ ಕ್ಷಣಗಳನ್ನು ನೆನೆಯುತ್ತಲೇ, ಸನ್ನಿವೇಶದ ದಾರುಣ ವಿಷಾದ ನಮಗೆ ಮುಟ್ಟಿಸುವ ಲೇಖನದ ಸಹಜ ಸರಳತೆ ನನ್ನನ್ನು ಕಲಕಿ ಬಿಟ್ಟಿತು. ಈ ಪತ್ರಕ್ಕೆ ತಕ್ಷಣದ ಪ್ರೇರಣೆ ಈ ಲೇಖನವೇ; ನಾನು ಕಂಡರಿಯದ ಎಳೆಯ ಚಂದ್ರಿಕಾಳ ಸಾವೇ.

ನಿಮ್ಮ ಪುಸ್ತಕದ ಸಂದರ್ಭದಲ್ಲಿ ತೀರ ಇತ್ತೀಚೆಗೆ (ಈ ಸಾರೆ ಅಮೇರಿಕೆಯಲ್ಲಿದ್ದಾಗ) ನನ್ನ ಲಕ್ಷ್ಯಕ್ಕೆ ಬಂದ ಒಂದು ಚಿಕ್ಕ ಪುಸ್ತಕವನ್ನು ಉಲ್ಲೇಖಿಸುವ ಮನಸ್ಸಾಗುತ್ತಿದೆ. ಪುಸ್ತಕದಂಗಡಿಯೊಂದರಲ್ಲಿ ಆಕಸ್ಮಿಕವಾಗಿ ಕೈಗೆ ಬಂದ ಈ ಪುಸ್ತಕ ಕೂಡ ಹೊಸ ಸಾಹಿತ್ಯ ಪ್ರಕಾರವೊಂದನ್ನು ಸೃಷ್ಟಿಸಿದೆ. ಪುಸ್ತಕದ ಹೆಸರು—"Notes to Myself" (My struggle to become a person) by Hugh Prather (A Banthane book) ನಾನೂ ಸಾಹಿತ್ಯದ ಬಗೆಗೆ, ಬದುಕಿನ ಬಗೆಗೆ ನನಗೆ ಹೊಳೆದ ವಿಚಾರಗಳನ್ನು ಈ ರೂಪದಲ್ಲಿ ಸಂಗ್ರಹಿಸ ಬೇಕೆಂದಿದ್ದೇನೆ. ನನಗೆ ಸೇರಿದ್ದು—ನಿಮ್ಮ ಲೇಖನಗಳಲ್ಲಿಯು ಹಾಗೇ ಈ ಟಿಪ್ಪಣಿಗಳಲ್ಲಿಯು ಸಹಜತೆ. ಬೆಂಗಳೂರಿನಲ್ಲಿ ಈ ಪುಸ್ತಕ ಸಿಗದಿದ್ದರೆ ನನ್ನ ಪ್ರತಿಯನ್ನು ಕಳಿಸಿಕೊಡುತ್ತೇನೆ, ತಿಳಿಸಿರಿ.

ಇತಿ ಪ್ರೀತಿಯಿಂದ,
ನಿಮ್ಮ

ಮುಂಬಯಿ

ಯಶವಂತ ಚಿತ್ತಾಲ

ಪ್ರಿಯ ಶ್ರೀನಿವಾಸ್,

ಹೊಸ ಶೂದ್ರ ತಲುಪಿದೆ. ಲಂಕೇಶ್ ಸಂಕಿರಣ ಬಗ್ಗೆ ಏನಾದರೂ ಇರಬಹುದೆಂಬ ಆಸೆಯಿಂದ ತೆಗೆದು ನೋಡಿದೆ. ಡಿಸೆಂಬರ್ ತನಕ ಕಾಯಬೇಕೆ.

ರಾಜೇಂದ್ರ ಚೆನ್ನಿ ಶಂ.ಬಾ ಲೇಖನ ಚೆನ್ನಾಗಿದೆ. ಶಂ.ಬಾ ಬಗ್ಗೆ ಹೆಚ್ಚು ತಿಳಿಯದಿದ್ದರು ನಿಶಿತವಾಗಿ ಬರೆಯುತ್ತಾ ಪ್ರಶ್ನೆಗಳನ್ನು ಎತ್ತುವ ಅವರ ರೀತಿ ಒಳ್ಳೆಯ ಸಂವಾದಕ್ಕೆ ಆನುವಾಗಬಲ್ಲದು. ವಿಜಯಶ್ರೀ ಸಬರದ ಪದ್ಯ ಪರಿಚಿತ ಲಯದ್ದೆ ಆದರೂ ಏನೋ ಒಂದು freshness ಇದೆ.

ಮುಖ್ಯವಾಗಿ ಶೂದ್ರ ಸಂಚಿಕೆ, ನಿಮ್ಮನ್ನು, ಬೆಂಗಳೂರಿನ ದಿನಗಳನ್ನು, ಗೆಳೆಯರನ್ನು ನೆನಪಿಗೆ ತಂತು.

ಬರೆಯುತ್ತೀರಲ್ಲ.

ನಿಮ್ಮ ಪ್ರೀತಿಯ,

ನಾಗಪುರ ಕೆ. ಎಸ್. ಸತ್ಯನಾರಾಯಣ

# ಸುದ್ದಿಯ ಗುದ್ದಾಟ

## ಕುವೆಂಪು ಅಧ್ಯಯನ ಕೇಂದ್ರ

ಒಂದು ಕಾಲದಲ್ಲಿ ಕುವೆಂಪುರವರನ್ನು ಅಟ್ಟದ ಮೇಲೆ ಕೂರಿಸುವ ನೂರಾರು ಜನ ಭಟ್ಟಂಗಿಗಳಿದ್ದರು. ಅವರ್‍ಯಾರೂ ಕುವೆಂಪುರವರ ಸಾಹಿತ್ಯವನ್ನು ಮೌಲ್ಯಮಾಪನ ಮಾಡುವ ಹೆಚ್ಚುಗಾರಿಕೆಯನ್ನು ಪಡೆದವರಾಗಿರಲಿಲ್ಲ. ಆದರೆ ಜಿ. ಎಸ್. ಶಿವರುದ್ರಪ್ಪರಂಥವರು ಗುಟ್ಟಾಗಿ ಪ್ರೀತಿಸುತ್ತ ಕುವೆಂಪುರವರನ್ನು ಮೆಚ್ಚಿಕೊಂಡು ಮುಕ್ತವಾಗಿ, ಬದುಕುತ್ತಿರುವ ಕವಿ. ಇತ್ತೀಚಿನ ವರ್ಷಗಳಲ್ಲಿ ಬೆಂಗಳೂರಿನಲ್ಲಿ ಹುಟ್ಟಿಕೊಂಡಿರುವ 'ಕುವೆಂಪು ಅಧ್ಯಯನ ಕೇಂದ್ರ' ಕ್ರಿಯಾಶೀಲವಾಗಿರುವ ಸಂಘಟನೆಯಾಗಿದೆ. ಈಗಾಗಲೇ ಸಾಕಷ್ಟು ಒಳ್ಳೆಯ ಕಾರ್ಯಕ್ರಮಗಳನ್ನು ಮಾಡುತ್ತ ಬಂದಿರುವ ಈ ಸಂಸ್ಥೆಯ ಬೆನ್ನೆಲುಬು ಹೆಚ್. ಆರ್. ದಾಸೇಗೌಡ. ಇವರಿಗೆ ಬೆಂಬಲವಾಗಿರುವ ವೈ. ಎಸ್. ವಿ. ದತ್ತ ನಗುನಗುತ್ತ ಎಂಥ ಕೆಲಸವನ್ನಾದರೂ ನಿರ್ವಹಿಸುವ ಚೈತನ್ಯವನ್ನು ಪಡೆದಿರುವ ವ್ಯಕ್ತಿ. ಹಾಗೆಯೇ ಸಾಹಿತ್ಯದ ಸಲಹಾಗಾರರಾಗಿರುವ ಎಂ. ಎಚ್. ಕೃಷ್ಣಯ್ಯ—ಅ.ರಾ. ಮಿತ್ರ ಅವರು ಈ ಕೇಂದ್ರದ ಗಟ್ಟಿ ಅಂಗಾಂಗಗಳು. ಸದಾ ಸಹನಶೀಲರಾಗಿರುವ ದಾಸೇಗೌಡರು ಪ್ರಬುದ್ಧವಾಗಿ ಯೋಚಿಸುವ, ಬರೆಯುವ ವ್ಯಕ್ತಿಗಳನ್ನು ಹೆಚ್ಚು ಹುಡುಕುತ್ತ ಹೋಗಬೇಕು, ಒಂದು ಕಾರ್ಯಕ್ರಮ ಮುಂದೂ

ಡಿದರೂ ಚಿಂತೆಯಿಲ್ಲ, ನೀಳಾದೇವಿ, ಹಾಗೂ ಪಂಕಜ ಅಂಥವರನ್ನು ವೇದಿಕೆಯ ಮೇಲೆ ಕೂರಿಸುವ ಧೈರ್ಯ ತಗೊಳ್ಳದಿರಲಿ. ಈ ದಿಕ್ಕಿನಲ್ಲಿ ಕೃಷ್ಣಯ್ಯ ಮತ್ತು ಮಿತ್ರರಂಥವರು ಅರ್ಥಪೂರ್ಣ ಸಲಹೆ ಕೊಡುವುದರ ಮೂಲಕ ದಾಸೇಗೌಡರ ಕೈಯನ್ನು ಭದ್ರಪಡಿಸಬೇಕು. ಇಲ್ಲದಿದ್ದ ಪಕ್ಷದಲ್ಲಿ ನಾವುಮಾಡುವ ಕಾರ್ಯಕ್ರಮಗಳೆಲ್ಲ ಮಾಮೂಲಿ ಉತ್ಸವಗಳಾಗುವ ಸಂಭವ ಜಾಸ್ತಿ. ಯಾಕೆಂದರೆ, ಕುವೆಂಪುರವರಂಥ ದೊಡ್ಡ ವ್ಯಕ್ತಿತ್ವದ ಹೆಸರಿನಲ್ಲಿ ಮಾಡುವ ಯಾವುದೇ ಚಟುವಟಿಕೆ ಸೃಜನಶೀಲತೆಯನ್ನು ಬೆಳೆಸುವ ದಿಕ್ಕಿನಲ್ಲಿ ನಡೆಯಬೇಕು. ಇದನ್ನು ಗೌಡರು ನಗುತ್ತಲೇ ಮಾಡುತ್ತ ಹೋಗಲಿ ಎಂದು ಆಶಿಸುವೆ.

## ಸಾದರ ಸ್ವೀಕಾರ

ನಿಕೊಲಾಲ್ ಗೊಗೊಲ್‌ನ 'ಓವರ್ ಕೋಟ್'
ಕನ್ನಡಕ್ಕೆ ಟಿ. ಪಿ. ಅಶೋಕ — ಬೆಲೆ : 6.00

ಅಂತರಂಗದ ಪುಟಗಳು (ಕಥೆಗಳು) ವೈದೇಹಿ — ಬೆಲೆ : 10.00

ಗೋಲ (ಕಥೆಗಳು) ವೈದೇಹಿ,
ಅಕ್ಷರ ಪ್ರಕಾಶನ, ಸಾಗರ, ಶಿವಮೊಗ್ಗ ಜಿಲ್ಲೆ. — ಬೆಲೆ : 10.00

ಅಂಕ (ಕಥೆಗಳು) ಬೊಳುವಾರು ಮಹಮದ್ ಕುಂಞಿ.,
ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ. — ಬೆಲೆ : 15.00

ವಿವೇಕಾನಂದರ ಕ್ರಾಂತಿಕಾರಿ ವಿಚಾರಗಳು
ಸಃ. ಜ. ಹೊ. ನಾರಾಯಣಸ್ವಾಮಿ, ಮಾನವ ಪ್ರಕಾಶನ, 2064/6,
ಉತ್ತರ ಬಡಾವಣೆ, ಹಾಸನ. — ಬೆಲೆ: 15.00

ಕ್ಷಣ ಕ್ಷಣಕ್ಕೂ ಹೊಸ ಬದುಕಿಗೆ ಜೆ. ಕೃಷ್ಣಮೂರ್ತಿ,
ಅನು : ಟಿ. ಜಿ. ಭಟ್ಟ, ಸಮಾಜ ಪುಸ್ತಕಾಲಯ, ಧಾರವಾಡ-1
ಬೆಲೆ : 13.00

ದಗ್ಧ (ಕವನ ಸಂಕಲನ) ನಲ್ಲೂರು ಪ್ರಸಾದ್, ಅರ್ಪಿತ ಪ್ರಕಾಶನ,
ನಂ. 140, 2ನೇ ಮುಖ್ಯ ರಸ್ತೆ. ಚಾಮರಾಜಪೇಟೆ, ಬೆಂಗಳೂರು-18
ಬೆಲೆ : 9-00

ಕಳೆದು ಹೋಗುತಿವೆ ದಿನಗಳು (ಕವನ ಸಂಕಲನ)
ಸುವರ್ಣ ಕಾಡನಕುಪ್ಪೆ, ಭಾರತೀ ಪ್ರಕಾಶನ, ಮೈಸೂರು-9 ಬೆಲೆ : 5-00

ಪ್ರಶ್ನೆಗಳ ಪ್ರಪಂಚ ಮಹಾಬಲೇಶ್ವರರಾವ್, ಹಳೆ ವಿದ್ಯಾರ್ಥಿ
ಪ್ರಕಾಶನ, ಡಾ|| ಟಿ. ಎಂ. ಎ. ಪೈ ಶಿಕ್ಷಣ ಮಹಾವಿದ್ಯಾಲಯ, ಉಡುಪಿ-2
ಬೆಲೆ : 6-50

ಪ್ರಮೇಯ (ಕವನ ಸಂಕಲನ) ವೇಣುಗೋಪಾಲ ಸೊರಬ,
ಸವಿತಾ ಪ್ರಕಾಶನ, 86, ಕನಕ ಆಸ್ಪತ್ರೆ ರಸ್ತೆ, ಅಜಾದಾನಗರ, ಕನಕಪುರ.
ಬೆಲೆ : 6-00

ನಂಜು (ಕವನ ಸಂಕಲನ) ವಿಜಯರಾಘವನ್,
ಸೌಮ್ಯ ಪ್ರಕಾಶನ, ಶಿವಾರಪಟ್ಟಣ-573130 ಬೆಲೆ : 5-00

ನಿಸಾರ್ ಅಹಮದ್ ಅವರ ಕಾವ್ಯ ಸೃಷ್ಟಿ ಮತ್ತು ದೃಷ್ಟಿ ಬೆಲೆ : 3-00

ಯಲಹಂಕ ಪ್ರಭು (ನಾಟಕ) ಹ.ಕ. ರಾಜೇಗೌಡ. ಬೆಲೆ : 15-00

ಲಹರಿ (ಕವನ ಸಂಕಲನ) ಹೆಚ್.ಆರ್. ಲೀಲಾವತಿ. ಬೆಲೆ : 4-50

ಮೇಲಿನ ಮೂರು ಕೃತಿಗಳ ಸಂಪಾದಕರು : ಹೆಚ್.ಆರ್. ದಾಸೇಗೌಡ, ಕುವೆಂಪು
ಅಧ್ಯಯನ ಕೇಂದ್ರ, 681, 'ಅನುರಾಧ 12ನೇ ಅಡ್ಡರಸ್ತೆ, ಮಾಗಡಿ ಕಾರ್ಡ್ ರಸ್ತೆ
ಬಡಾವಣೆ, ಬೆಂಗಳೂರು-40

ವಚನಕಾರರು ಮತ್ತು ಶಬ್ದಕಲ್ಪ, ಅ. ರಾ. ಮಿತ್ರ, ಪ್ರಸಾರಾಂಗ,
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ಬೆಲೆ : 10-00

ಗುಡ್ಡದಿಂದ ತೆಗೆದ ಹೆಣ (ಕಥಾಸಂಕಲನ) ಹಾಡ್ಲಹಳ್ಳಿ ನಾಗರಾಜ್,
ಭವಾನಿ ಪ್ರಕಾಶನ, 533, 14ನೇ ತಿರುವು ರಸ್ತೆ, ಕುವೆಂಪುನಗರ, ಹಾಸನ,
ಬೆಲೆ : 8-50



# ಕನಸಿಗೊಂದು ಕಣ್ಣು

## ಬಸವಂತ ಎಂಬ ಮಾಟಗಾರ

ನಮ್ಮ ದಿನನಿತ್ಯದ ವ್ಯವಹಾರದಲ್ಲಿ ಯಾರ್‍ಯಾರನ್ನು ನೋಡ್ತಿವಿ ಯಾರ್‍ಯಾರನ್ನ ನೋಡುವುದಿಲ್ಲ ಅಥವಾ ನೋಡಲಾಗುವುದಿಲ್ಲ ಎಂಬುದನ್ನು ಹೇಳಲಾಗುವುದಿಲ್ಲ. ಎಷ್ಟೋಬಾರಿ ನಮಗೆ ಭವಿಷ್ಯದ ಬಗ್ಗೆ ನಂಬಿಕೆಯಿಲ್ಲದಿದ್ದರೂ ಅದನ್ನು ಹುಟ್ಟಿಸುವ ರೀತಿಯಲ್ಲಿ ಮಾತಿನ ಮೋಡಿಯನ್ನು ನಮ್ಮ ಮುಂದಿಟ್ಟು ಭೀತರನ್ನಾಗಿಯೋ ಪುಳಕಿತರನ್ನಾಗಿಯೇ ನಿಲ್ಲಿಸಿ ಹೋಗುವರು ಯಾಕೆಂದ್ರೆ, ಭೂತ–ವರ್ತಮಾನ–ಭವಿಷ್ಯದ ಕಾಲಸಂಬಂಧಗಳನ್ನು ಒಂದು ಹತ್ತಿರ ನಿಲ್ಲಿಸಿ ಸಂಘರ್ಷ ನಿರ್ಮಿಸಿಬಿಡುತ್ತಾರೆ. ಆಗ ನಮ್ಮ ಪರದಾಟ ವಿಚಿತ್ರ. ನಂಬಲಿ-ನಂಬದಿರಲಿ ಬೀಜವನ್ನು ಮನಸ್ಸಿನೊಳಗೆ ಬಿತ್ತಿ ಹೋದಮೇಲೆ ಮುಗಿಯಿತು. ಅದು ಮರಿ ಮಾಡುತ್ತ ಕೂರುತ್ತದೆ. ಈ ಕಲೆಗೆ ಒಂದು ರೀತಿಯ ಮಾಟಗಾರಿಕೆ ಬೇಕಾಗುತ್ತದೆ. ಸಂಗೀತಗಾರ ನಮ್ಮನ್ನು ಹಿಡಿದು ನಿಲ್ಲಿಸುವಂತೆ, ಆಟಗಾರ ನಮ್ಮನ್ನು ಉತ್ಸಾಹಗೊಳಿಸುವಂತೆ, ಮಾಟವಾದ ಹುಡುಗಿ ತನ್ನ ಕಣ್ಣಿನ ಹೊಳಪಿನ ಮೂಲಕ ಒಂದು ಕ್ಷಣ ನಮ್ಮನ್ನು ಹುಚ್ಚರನ್ನಾಗಿಸುವಂತೆ, ನಮ್ಮ ಬದುಕಿನ ಚದುರಂಗ ಕ್ರಿಯೆಯಲ್ಲಿ ಇವೆಲ್ಲವೂ ಏಕಕಾಲದಲ್ಲಿ ಸಂಸಾರ ಮಾಡುವುದನ್ನು ತಿಳಿಯಲು ಪ್ರಯತ್ನಿಸುವ ಸಮಯದಲ್ಲಿ ನಮ್ಮ ಬೇಟೆಗಾರರು ಆಕಸ್ಮಿಕವಾಗಿಯೋ ಅನಿರೀಕ್ಷಿತವಾಗಿಯೋ ಸ್ಪಂದಿಸಿ ಹೋಗುತ್ತಾರೆ. ಇಂಥ ಸ್ಪಂದನ ಒಂದೆರಡು ತಿಂಗಳ ಹಿಂದೆ ಆಗಿ ಸದಾ ನೆನಪಿನಲ್ಲಿ ಉಳಿಯುವಂತೆ ಖುಷಿಕೊಟ್ಟು ಹೋದದ್ದನ್ನು ಸಂದರ್ಭಬಂದಾಗಲೆಲ್ಲ ಆ ನೆನಪಿನ ಪುಟಗಳನ್ನು ತೆರೆದು ಓದುತ್ತ ಬಂದೆ. ಈಗ ಇಲ್ಲಿ ಬರೆದು 'ಕನಸಿಗೊಂದು ಕಣ್ಣು'ಗೆ ಕೊಡುತ್ತಿರುವುದರಿಂದ ಅದು ಮತ್ತೆ ತೆರೆಯದಂತೆ ಆಗಬಹುದು. ಯಾಕೆಂದರೆ ಒಮ್ಮೆ ನಮ್ಮ ಅನುಭವದ ಮೌನವನ್ನು ಬಿಚ್ಚಿದೆವೆಂದರೆ ನಂತರ ಅದರಲ್ಲಿ ಉಳಿಯುವುದು ಬರಡು ಚಿತ್ರಗಳು ಮಾತ್ರ. ಈ ಕಾರಣಕ್ಕಾಗಿಯೇ ಗುಟ್ಟನ್ನು ಬಚ್ಚಿಡುವುದರಲ್ಲಿಯ ಅದಮ್ಯತೆ ಜಗತ್ತಿನ ವಿವಿಧ ಗೂಢ ಸಂಬಂಧಗಳಂತೆ ರೋಮಾಂಚಕಾರಿ.

ಅಂದು ಬೆಳಿಗ್ಗೆ ಸುಮಾರು ಆರು ಘಂಟೆಯಾಗಿತ್ತು; ಸ್ವಲ್ಪ ತಂಪಾದ ಹವೆಗೆ ಹಾಸಿಗೆಯನ್ನು ಇನ್ನು ಸ್ವಲ್ಪ ಹೊತ್ತು ಅಪ್ಪಿಕೊಳ್ಳುವ ಎಂಬ ನಿರೀಕ್ಷೆಯಲ್ಲಿರುವಾಗಲೇ ಆತ ಬಂದ. ಬಂದು ನಿಂತಾಗ ನೇರವಾಗಿ ವಿವರಿಸಲಾರದ ನಟನೆಯಿಂದ ಬಂದುನಿಂತಿದ್ದ.

 (ಮುಂದಿನ ಸಂಚಿಕೆಯಲ್ಲಿ 'ನಾಕಂಡ ಉಡುಪಿಯ ಜನ)

ಸನ್ನ ಹಾಗೆ ಕೊಠಡಿಯ ಇನ್ನೊಂದು ಬದಿಗೆ ಮಂಚವನ್ನು ಅಪ್ಪಿಕೊಂಡಿದ್ದ ಕಾ.ತ. ಚಿಕ್ಕಣ್ಣ, ನೆಲದ ಮೇಲೆ, ಅಂದರೆ ಸಿಮೆಂಟಿನ ತಣ್ಣನೆಯ ಮೈಗೆ ತನ್ನ ಸ್ವಲ್ಪ ಬೃಹತ ಎನ್ನಬಹುದಾದ ದೇಹವನ್ನು ಕೊಟ್ಟು ಗಡಿಯಾರದ ಮುಳ್ಳಿನಂತೆ ಸುತ್ತಾಡಿ ಮಲಗಿದ್ದ ಕಲಾವಿದ ಸಿ.ಚಂದ್ರಶೇಖರ್ ಆತನ ಬರುವಿಕೆಗೆ, ಬರುವಾಗಲೇ ತಂದ ಮಾತಿನವೋಡಿಗೆ ಎದ್ದರು. ಚಂದ್ರಶೇಖರ್ ತಕ್ಷಣ ಕಾಫಿಗೆ ಆಜ್ಞೆ ಮಾಡಿದರು. ಕಾಫಿ ಅಥವಾ ಚಹಾ ಬಂದನಂತರ ಎದ್ದೇಳುವ ಧೈರ್ಯ ವಹಿಸೋಣ ಎಂದು ಮಲಗೇ ಇದ್ದೆ. ಜಾಸ್ತಿ ಸಮಯ ಮಲಗುವಂತಿರಲು ಸಾಧ್ಯವಿರಲಿಲ್ಲ. ಬಾದಾಮಿ-ಐಹೊಳೆ-ಪಟ್ಟದಕಲ್ಲು ನೋಡಲು ಎಂಟು ಘಂಟೆಗೆ ಬಿಡಬೇಕಾಗಿತ್ತು. ಇಲ್ಲದಿದ್ದ ಪಕ್ಷದಲ್ಲಿ ಮಧ್ಯಾಹ್ನ ಒಂದು ಘಂಟೆಯವರೆವಿಗೆ ಬಾಗಲಕೋಟೆಯ ಭೀಕರ ಬಿಸಿಯನ್ನು ಎದುರಿಸುತ್ತ ಕೂರಬೇಕು. ನಂತರ ಕೂಡಲಸಂಗಮಕ್ಕೆ ಹೋಗಿ ಬಸವಣ್ಣನ ಆತ್ಮಕ್ಕೆ ಬಿಸಿಯನ್ನು ಅರ್ಪಿಸಬೇಕಾ ಗಿತ್ತು. ಹೋಗಲಿ ಹನ್ನೆರಡನೆಯ ಶತಮಾನದ ಬಸವಣ್ಣನ ಪ್ರಸ್ತಾಪಕ್ಕೆ ಹೋಗದೆ ನಮ್ಮ ಮುಂದೆ ನಿಂತಿದ್ದ ಬಸವಂತನ ಬಗ್ಗೆ ಹೇಳಲು ಪ್ರಾರಂಭಿಸುವೆ.

ಈ ಬಸವಂತನ ಮೂಲ ಕಸುಬನ್ನು ಹೇಳುವ ಮುನ್ನ ಒಂದಷ್ಟು ಈತನ ದೇಹ ಚರ್ಯೆಯನ್ನು ಹೇಳಿ ಮುಗಿಸುವೆ. ಯಾಕೆಂದರೆ ಒಬ್ಬನ ವ್ಯಕ್ತಿತ್ವದಲ್ಲಿ ಭೌತಿಕ ದೇಹದ ಪಾಲು ಬಹಳಷ್ಟು ಇರುತ್ತದೆ ಎಂಬುದನ್ನು ಗಾಢವಾಗಿ ನಂಬಿದ್ದೇನೆ. ಹಾಗೆ ನೋಡಿದರೆ ಈತನ ಒಟ್ಟು ಕ್ರಿಯೆ ದೇಹವನ್ನು ಬಳುಕಿಸುವಿಕೆಯನ್ನು ಅವಲಂಬಿಸಿದ್ದು, ನಂತರ ತನ್ನ ಮಾಧುರ್ಯವಾದ ಮಾತುಗಳಿಂದ ಒಟ್ಟು ಹತ್ತು ಬೆರಳುಗಳನ್ನು ತಂತಿಗಳ ಮೇಲೆ ಆಡಿಸುವ ರೀತಿಯಲ್ಲಿ ಆಡಿಸುತ್ತಿದ್ದ ಎಂಬುದು ಮುಖ್ಯವಾಗಿರುವುದ ರಿಂದ ಹೇಳಬೇಕಾಗಿದೆ. ಬಸವಂತ ಆರಡಿ ಎತ್ತರವಿದ್ದ. ಬಹಳ ಹೆಚ್ಚೆಂದರೆ ವಯಸ್ಸು ಮುವತ್ತೈದಿರಬಹುದು. ಎತ್ತರಕ್ಕೆ ತಕ್ಕ ಹಾಗೆ ದಪ್ಪನಾಗಿರಲಿಲ್ಲ. ಸದಾ ಹಸನ್ಮುಖಿ. ಉತ್ತರ ಕರ್ನಾಟಕದ ಮಾಮೂಲಿ ಬಿಳಿಯ ಕಚ್ಚೆಪಂಚೆ. ಅದರ ಮೇಲೆ ಮಾಸಲು ಬಣ್ಣದ ತೋಳುದ್ದದ ಬಿಳಿಯ ಅಂಗಿಯನ್ನು ಧರಿಸಿದ್ದ. "ಮಸಾಜ್ ಮಾಡ್ತೀನ್ರೀ. ದೇಹವೆಲ್ಲ ಹಗುರವಾಗ್ತಿದ್ರೀ. ಇನ್ನೊಮ್ಮೆ ಈಕಡೆ ಬಂದಾಗ ಬಸವಂತ ಎಲ್ಲಿದ್ದಾನೆ ಅನ್ನೋದನ್ನು ನೀವು ಹುಡ್ಕೊಂಡು ಬರ್ತೀರಿ. ಬೇಕಾದರೆ ಪಕ್ಕದ ಕೋಣೆಯಲ್ಲಿರೋ ಇನ್ಸಪೆಕ್ಟರ್ ಸಾಹೇಬರನ್ನು ಕೇಳ್ರೀ. ಅವರಿಗೆ ಎಷ್ಟು ವರ್ಷದಿಂದ ಮಾಡ್ತಾನೆ ಬಂದಿದ್ದೀನಿ. ಜಾಸ್ತಿ ರೊಕ್ಕ ಏನೂ ಇಲ್ರೀ, ಬರೇ ಎಂಟು ರೂಪಾಯಿನ್ರಿ" ಎಂದು ಪೂರ್ತಿ ತನ್ನ ಕಸುಬನ್ನು ಪೂರ್ಣವಿರಾಮವಿಲ್ಲದೆ ಮುಗಿ ಸಿದ್ದ. ಇತ್ತೀಚೆಗೆ ನಮ್ಮ ನಾಗರೀಕ ಸಮಾಜದಲ್ಲಿ ಮಸಾಜ್ ಒಂದು ಆಕರ್ಷಕ ವೃತ್ತಿ. ಅದರಲ್ಲೂ 'ನೈಸರ್ಗಿಕ ಚಿಕಿತ್ಸೆ'ಯ ಹೆಸರಿನಲ್ಲಿ ಹುಡುಗಿಯರ ಮೂಲಕ ಮಸಾಜ್ ಮಾಡಿಸ್ತಾ ಶ್ರೀಮಂತ ವೇಶ್ಯಾವೃತ್ತಿಗೆ ಹೊಸ ಸ್ವರೂಪವನ್ನು ಕೊಟ್ಟು

ಆಕರ್ಷಿಸುವಂಥದ್ದು. ಹಾಗೆ ನೋಡಿದರೆ ಮಸಾಜ್ ಎನ್ನುವುದು ನೈಸರ್ಗಿಕ ಚಿಕಿತ್ಸೆಯಾಗಿ ನಮ್ಮ ಪರಂಪರೆಯಲ್ಲಿಯೇ ಇರತಕ್ಕಂತದ್ದೇ. ನನಗೆ ಈಗಲೂ ನೆನಪಿದೆ. 'ಯುಗಾದಿ' ಹಬ್ಬದ ಸಮಯದಲ್ಲಿ ನನ್ನ ದೊಡ್ಡಪ್ಪ ಬಿಸಿಯಾದ ಹರಳೆಣ್ಣೆಗೆ ನಿಂಬೆ ಹಣ್ಣಿನ ರಸವನ್ನು ಹಿಂಡಿ ತಲೆಯಮೇಲೆ ಸುರಿದು ಪಟಪಟನೆ ಹೊಡೆದು ಕೊನೆಗೆ ಇಡೀ ಮೈಕೈಗೆ ತಿಕ್ಕುತ್ತಿದ್ದ ಕ್ರಮವೇ ನನಗೆ ರೋಮಾಂಚಕಾರಿಯಾಗಿತ್ತು. ನಂತರ ಸ್ನಾನದ ನಂತರ ಒಟ್ಟು ದೇಹ ಎಷ್ಟೊಂದು ಹಗುರವಾಗಿರುತ್ತದೆಂಬುದನ್ನು ಅನುಭವಿಸಿದ್ದೇನೆ. ಮಸಾಜ್‌ಗೆ ಆ ರೀತಿಯ ಅಗಾಧವಾದ ಶಕ್ತಿಯಿದೆಯೆಂಬುದು ಗೊತ್ತು. ಥೈಲ್ಯಾಂಡಿನ ರಾಜಧಾನಿಯಾದ ಬ್ಯಾಂಕಾಕ್‌ನಲ್ಲಿಯ ಅದ್ಭುತ ಮಸಾಜ್ ಕೇಂದ್ರಗಳನ್ನು ನೋಡಿ ಆಶ್ಚರ್ಯ ಪಟ್ಟಿದ್ದೇನೆ. ಆದರೆ ವಿದೇಶಿಯರ ಹತ್ತಿರ ದುಡ್ಡು ಕೀಳಲು ಚಕ್ಕಂದ ವೇಶ್ಯಾವೃತ್ತಿಯಾಗಿದೆ. ಈಗ ನಮ್ಮಲ್ಲಿಯೂ ಬೃಹತ್ ನಗರಗಳಲ್ಲಿ ಇದು ಹೆಚ್ಚು ಆಕರ್ಷಕವಾಗುತ್ತಿದೆ. ಆದರೆ ನಮ್ಮ ಪರಂಪರೆಯ ಬಸವಂತ ಮಸಾಜ್‌ನ ಪೂರ್ಣ ಪ್ರಮಾಣದ ನಾಟಿ ವೈದ್ಯ. ನಾನಂತೂ ಒಪ್ಪಿದೆ. ಮೂರು ರೂಪಾಯಿ ಎಣ್ಣೆಗೆ ಕೇಳಿದ. ಇದು ಮೊದಲು ಎಂಟು ರೂಪಾಯಿಯಲ್ಲಿ ಸೇರಿರಲಿಲ್ಲ. ಕೊನೆಗೆ ಕೊಡಲು ಒಪ್ಪಿಕೊಂಡೆ. ಇದು ಒಂದು ದೃಷ್ಟಿಯಿಂದ ಬೆವರುಸುರಿಸಿ ದುಡಿದ ಹಣವಾಗಿರಲಿಲ್ಲ. ಹಿಂದಿನ ದಿನ ಬಸ್ಸಿನಲ್ಲಿ ಬರುವಾಗ ರಾಮಚಂದ್ರ ಶರ್ಮ, ಡಿ. ಆರ್. ನಾಗರಾಜ್, ವ್ಯಾಸರಾವ್ ಹಾಗೂ ಮಲ್ಲೇಪುರಂ ವೆಂಕಟೇಶ್ ಜೊತೆ ಇಸ್ಪೀಟು ಆಡಿದ್ದರಿಂದ ನೂರು ರೂಪಾಯಿ ಬಂದಿತ್ತು. ನಮ್ಮಲ್ಲ ಲಕ್ಷಾಧಿಗಳು ಅಥವಾ ಜಬರ್ ದಸ್ತುಗಳು ಹುಟ್ಟಿಕೊಳ್ಳುವುದು ಈ ರೀತಿಯ ಪರೋಕ್ಷ ಭ್ರಷ್ಟ ಹಣದಿಂದಲೇ ಎಂಬುದನ್ನು ಇಲ್ಲಿ ವಿವರಿಸಲು ಹೋಗುವುದಿಲ್ಲ.

ಬಸವಂತ ಎಣ್ಣೆ ತಂದ. ಅದು ಇನ್ಸ್‌ಪೆಕ್ಟರ್‌ಗೆ ತಿಕ್ಕಿ ಉಳಿದ ಎಣ್ಣೆ ಇರಬಹುದು. ಒಂದು ರೀತಿಯ ಕೆಟ್ಟ ವಾಸನೆಯಿತ್ತು. ಕೊಬ್ಬರಿ ಎಣ್ಣೆಯ ಯಾವ ಗುಣಗಳು ಅದರಲ್ಲಿರಲಿಲ್ಲ. ಒಟ್ಟಿನಲ್ಲಿ ನನ್ನ ದೇಹವನ್ನು ಆತನ ಕೈಗೆ ಕೊಟ್ಟೆ. ನಾನಾರೀತಿಯಲ್ಲಿ ಆಡಿಸಿದ. ನನ್ನ ದೇಹಕ್ಕೆ ಒಂದು ಜೀವ ಇದೆ, ಅದಕ್ಕೆ ನೋವಾಗುತ್ತದೆಂಬುದನ್ನು ಲೆಕ್ಕಿಸದೆ ಕೈಬೆರಳು-ಕಾಲ್ಬೆರಳು, ಕಿವಿ-ಮೂಗು, ಎದೆ-ಬೆನ್ನು ಒಂದನ್ನೂ ಬಿಡದೆ ತನ್ನ ಬೆರಳುಗಳ ಚಮತ್ಕಾರಕ್ಕೆ ದುಡಿಸಿ ಕೊಳ್ಳುವಾಗ ನನಗೆ ನೋವಾಗುತ್ತಿದ್ದರೂ. ಒಂದು ರೀತಿಯ ಉಲ್ಲಾಸದಿಂದ ಮಲಗಿದ್ದೆ. ಈ ರೀತಿಯ ನೋವು ಸದಾ ನೆನಪಿನಲ್ಲಿ ಉಳಿಯುತಕ್ಕಂತದ್ದು. ಒಂದು ದೃಷ್ಟಿಯಿಂದ ನಮ್ಮ ಬದುಕಿನಲ್ಲಿ ಸುಖಕ್ಕಿಂತ ನೋವು ಅಥವಾ ದುಃಖವೇ ಸ್ಮರಣೀಯವಾಗಿರುವುದು. ಇದಕ್ಕೇ ಇರಬಹುದು ಇತಿಹಾಸದ ಟ್ರ್ಯಾಜಿಡಿಗಳು ಸ್ಪಂದಿಸಿದಷ್ಟು ಸುಖಾಂತಗಳು ಸ್ಪಂದಿಸದಿರುವುದು.

ಬಸವಂತನ ಈ ಚಮತ್ಕಾರದ ನಡುವೆ ನಾನಾ ಪ್ರಶ್ನೆಗಳನ್ನು ಕೇಳಿದೆ. ನಾನು ನಿಲ್ಲಿಸಿದರೆ ಕಲಾವಿದ ಚಂದ್ರಶೇಖರ್ ಕೇಳುತ್ತಿದ್ದರು. ಇದೇ ಸಮಯಕ್ಕೆ ಪಕ್ಕದ

ರೂಪಿನಿಂದ ಬಂದ ಗೆಳೆಯ ಮಲ್ಲೇಪುರಂ ವೆಂಕಟೇಶ್, ಶಂ.ಬಾ ಜೋಶಿಯವರನ್ನು ಮರೆತು ಕುತೂಹಲದಿಂದ ನೋಡಿ ವಿಜೃಂಭಿಸುತ್ತಿದ್ದ. ಯಾಕೆಂದರೆ ವೆಂಕಟೇಶ್ ಹುಡುಗರ ದೇಹವನ್ನು ನೋಡಿ ಪುಳಕಿತನಾಗತಕ್ಕವನು. ಇಷ್ಟಾದರೂ ಗಂಭೀರ ಓದಿನ ವ್ಯಕ್ತಿ. ಬಸವಂತ ಮುಂದೆ ಹೋಗಿ "ದೊಡ್ಡ ದೊಡ್ಡ ಮನೆತನದ ಹೆಂಗಸರು ನನ್ನ ಕೈಯಿಂದ ಮಸಾಜ್ ಮಾಡಿಸಿಕೊಳ್ತಾರೀ" ಎಂದಾಗ ಈ ಮನುಷ್ಯ ಎಂಥ ವಂಡರ್‌ಫುಲ್ ಕ್ಯಾರೆಕ್ಟರ್ ಎಂದು ಮನಸ್ಸಿನಲ್ಲಿಯೇ ಸಂತೋಷಪಡುವಾಗ ಬಸವಂತನ ಮುಖದಲ್ಲಿ ಹೆಣ್ಣುತನದ ಲಜ್ಜೆ ಲಾಸ್ಯವಾಡುತ್ತಿತ್ತು. ಈತನ ಕಬ್ಬಿಣದಂತಹ ದೇಹದಲ್ಲಿಯ ಬೆರಳುಗಳು ನೂರಾರು ಜನರನ್ನು ಆಡಿಸಿರಬಹುದು. ತನ್ನ ಮಾತಿನ ಚಕ್ಕಂದ ಲಹರಿಯ ಮೂಲಕ ತನ್ನ ವೃತ್ತಿಗೆ ಜೀವಂತ ಚಲನೆಯನ್ನು ಉಳಿಸಿಕೊಂಡಿರಬಹುದು. ಆದರೆ ಬಸವಂತ ತನ್ನ ಕಲೆಯ ಒಟ್ಟು ಚಮತ್ಕಾರದ ಕೊನೆಯಲ್ಲಿ ಹಣೆಯ ಚರ್ಮವನ್ನು ಜೋರಾಗಿ ಇಕ್ಕಳದಲ್ಲಿ ಹಿಡಿಯುವಂತೆ ಹಿಡಿದು, ನೆಟಿಕೆ ತೆಗೆಯಲು ಪ್ರಯತ್ನಿಸಿದ್ದ. ಇದಂತು ಎರಡುದಿನ ನೋವನ್ನು ಉಳಿಸಿತು. ನನ್ನ ಮೇಷ್ಟ್ರು ಡಾ॥ ಮರುಳ ಸಿದ್ದಪ್ಪ ಎರಡು ಮಾತ್ರೆ ಕೊಟ್ಟಿದ್ದಕ್ಕೆ ಸ್ವಲ್ಪ ಕಡಿಮೆಯಾಯಿತು. ಆ ನೋವು ಬಸವಂತನ ಮೇಲೆ ಸಿಟ್ಟು ಬೆಳೆಸಲಿಲ್ಲ-ನೆನಪು ಉಳಿಸಿತು. ಮತ್ತೊಮ್ಮೆ ಬಾಗಲಕೋಟೆಗೆ ಹೋದಾಗ, ಬಸವಣ್ಣನನ್ನು ನೋಡುವ ಮೊದಲು ಬಸವಂತನನ್ನು ನೋಡುವೆ. ಆದರೆ ಹಣೆಯನ್ನು ಮಾತ್ರ ಕೊಡುವುದಿಲ್ಲ. ●

15-9-1986 ಶೂದ್ರ ಶ್ರೀನಿವಾಸ್

**ದಯಾನಂದ ಕಲ್ಲೆ**

ಈತನನ್ನು ಬಹಳಷ್ಟು ಬಾರಿ ನೋಡಿದ್ದೇನೆ. ಸಮಾಜವಾದಿ ಪಕ್ಷ ನನಗೆ ಪರಿಚಯ ಮಾಡಿಕೊಟ್ಟ ನಾನಾ ಅರ್ಥಪೂರ್ಣ ವ್ಯಕ್ತಿಗಳಲ್ಲಿ ಒಬ್ಬ. ಹೆಸರಿಗೆ ತಕ್ಕ ಹಾಗೆ ದಯೆಯನ್ನು ತುಂಬಿಕೊಂಡಿದ್ದ ವ್ಯಕ್ತಿ. ಜನತಾ ಪಕ್ಷದ ಹತ್ತಿರ ಆಕಸ್ಮಿಕವಾಗಿ ಸಿಕ್ಕಿದ ಹಿಂದುಳಿದ ವರ್ಗದ ಸಂಘಟನಾ ಕಾರ್ಯದರ್ಶಿಯಾದ ದಾಸ್ "ಶೂದ್ರ ಅವರೇ, ಕಲ್ಲೆಯವರ ಸಾವಿನಿಂದ ಎಷ್ಟು ಜನ ಬಡಹುಡುಗರು ಅನಾಥರಾಗಿದ್ದಾರೆ ಗೊತ್ತಾ" ಎಂದಾಗ ಮನಸ್ಸಿಗೆ ಪಿಚ್ಚೆನಿಸಿತು. ಬಂದಗದ್ದೆ ರಮೇಶ್‌ರವರಂಥ ಕ್ರಿಯಾಶೀಲ ವ್ಯಕ್ತಿ "ಶೂದ್ರ, ಕಲ್ಲೆಯವರು ನನ್ನ ಕಷ್ಟದ ದಿನಗಳಲ್ಲಿ ನನ್ನನ್ನು ಸಾಕಿದ್ದಾರೆ" ಎಂದು ಸಂತಾಪ ವ್ಯಕ್ತಪಡಿಸಿದಾಗ ಮನಸ್ಸಿನಲ್ಲಿಯೇ ಹೌದಲ್ಲವೇ ಎಂದುಕೊಂಡೆ. ಆಡಂಬರವಿಲ್ಲದ ಈ ಹಿಂದುಳಿದ ವರ್ಗದ ನಾಯಕ ಅಹಂನ್ನು ಬೆಳೆಸಿಕೊಂಡ ನಾಯಕನಾಗಿರಲಿಲ್ಲ. ಪ್ರೀತಿಯಿಂದ ಎಲ್ಲರಿಗೂ ಸಹಾಯಮಾಡುವ ವ್ಯಕ್ತಿಯಾಗಿದ್ದರು. ಅಂಥವರ ಆಕಸ್ಮಿಕ ಸಾವಿನ ಬಗ್ಗೆ ಸಂತಾಪ ಸೂಚಿಸಲು ಈ ಪುಟ್ಟ ಜಾಗವನ್ನು ಬಳಸಿಕೊಂಡಿದ್ದೇನೆ.

**ಇಂದು ನೆಡುವ ಒಂದು ಮರ—ನಾಳಿನ ಬಾಳಿನ ಆಧಾರ**
**ಇಂದೇ ಒಂದು ಮರ ನೆಡಿರಿ—ಉಚಿತ ಸಸಿಗಳು ನಿಮಗಾಗಿ ಕಾದಿವೆ**

ನೀವೊಂದು ಮರ ನೆಟ್ಟರೆ, ಆ ಮರದಿಂದ ನೀವು ಪಡೆಯುವ ಪ್ರಯೋಜನ ಒಂದೆರಡಲ್ಲ. ಪ್ರಯೋಜನ ನಿಮ್ಮೊಬ್ಬರಿಗೆ ಅಲ್ಲ—ನಿಮ್ಮ ಮನೆಯವರಿಗೆ, ಸುತ್ತ-ಮುತ್ತಲ ಜನರಿಗೆ, ಎಲ್ಲರಿಗೂ.

ನಮ್ಮ ಪೂರ್ವಜರಿಗೆ ಮರಗಳ ಮಹತ್ವ ತಿಳಿದಿತ್ತು. ಆದ್ದರಿಂದಲೇ ಆ ಕಾಲದಲ್ಲಿ ಪ್ರತಿಯೊಂದು ಹಳ್ಳಿಯಲ್ಲಿಯೂ ಮರಗಳ ಒಂದು ತೋಪು ಇರುತ್ತಿತ್ತು. ಪಟ್ಟಣಗಳಲ್ಲಿ ಪ್ರತಿಯೊಂದು ಮನೆಗೂ ಒಂದೆರಡು ಮರಗಳು ತಂಪಿನ ಆಸರೆ ನೀಡುತ್ತಿದ್ದವು.

ಆದರೆ ಇಂದು ನಮ್ಮ ಅರಣ್ಯ ಸಂಪತ್ತು ಕ್ಷೀಣಿಸಿದೆ. ಉರುವಲಿಗಾಗಿ ಮರಮುಟ್ಟುಗಳಿಗಾಗಿ, ಜಾನುವಾರುಗಳ ಮೇವಿಗಾಗಿ, ಕಾಡನ್ನು ಕಡಿದು ನಾಶಪಡಿಸಲಾಗಿದೆ. ಅಕ್ರಮವಾಗಿ ಮರ ಕಡಿಯುವುದರಿಂದಷ್ಟೆ ಅಲ್ಲ, ಕಾಡ್ಗಿಚ್ಚಿನಿಂದಲೂ ಮರಗಳು ನಾಶವಾಗುತ್ತಿವೆ. ಇದರ ಪರಿಣಾಮ ನಮ್ಮ ಭವಿಷ್ಯಕ್ಕೆ ಮಾರಕ. ನಮ್ಮ ಅಮೂಲ್ಯವಾದ ಕಾಡುಗಳು ಕಣ್ಮರೆಯಾದರೆ ನಮಗೆ ಕ್ಷಾಮ, ನೆರೆ ಹಾವಳಿ, ಅಷ್ಟೇಕೆ ಪರಿಸರದ ಅವನತಿ-ಎಲ್ಲವೂ ನಿಶ್ಚಿತ.

ಆದರೆ ಒಂದು ಆಶಾಕಿರಣವಿದೆ. ನಾವು ಪ್ರಯತ್ನಿಸಿದರೆ ಈಗಲೂ ನಮ್ಮ ನಾಡನ್ನು ಹಸಿರು ಮರಗಳ ನಂದನವನವನ್ನಾಗಿಸಬಹುದು. ಹೌದು, ಈ ಕಾರ್ಯದಲ್ಲಿ ನಿಮ್ಮ ಪ್ರಯತ್ನವೇ ಮುಖ್ಯ. ನೀವು ಒಂದು ಗಿಡ ನೆಡುವ ಮೂಲಕ ನೆರವಾಗಬಹುದು. ಸಾಧ್ಯವಾದರೆ, ಇಂದೇ ಒಂದು ಗಿಡ ನೆಡಬಹುದು. ನಿಮ್ಮ ಕೈತೋಟದಲ್ಲಿ, ಹಿತ್ತಲಿನಲ್ಲಿ, ಹೊಲದಲ್ಲಿ, ನಿಮ್ಮ ಶಾಲೆಯ ಕಾಂಪೌಂಡಿನಲ್ಲಿ - ಎಲ್ಲಿ ಬೇಕಾದರೂ, ಒಂದೇ ಗಿಡವೇಕೆ ಅವಕಾಶವಿದ್ದರೆ ಸಾವಿರಾರು ನೆಡಬಹುದಲ್ಲವೆ ?

ಇದು ತುಂಬಾ ಸುಲಭ ; 'ಏನೂ ಖರ್ಚಿಲ್ಲ'. ಕರ್ನಾಟಕ ಸರ್ಕಾರದ ಅರಣ್ಯ ಇಲಾಖೆ ನೀವು ಗಿಡ ನೆಡಲು ಸಹಾಯ ಮಾಡುವ ಯೋಜನೆಯೊಂದನ್ನು ಜಾರಿಗೆ ತಂದಿದೆ. ಇಲಾಖೆ ನಿಮಗೆ ಸಸಿಗಳನ್ನು, ಬೀಜಗಳನ್ನು ಪೂರೈಸುತ್ತದೆ. ಉಚಿತವಾಗಿ ! ತ್ವರೆಮಾಡಿ ! ನಿಮ್ಮ ಕೈಲಾದಷ್ಟು ನೆರವು ನೀಡಿ. ನಿಮಗೆ ಹತ್ತಿರವಿರುವ ಅರಣ್ಯ ಇಲಾಖೆಯ ಕಛೇರಿಯನ್ನು ಸಂಪರ್ಕಿಸಿ, ಅಥವಾ ನಮಗೆ ಬರೆಯಿರಿ :

ಅಧಿಕ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಸಮಾಜಿಕ ಅರಣ್ಯ ಯೋಜನೆ, 54, ಅರಣ್ಯ ಭವನ, ಮಲ್ಲೇಶ್ವರಂ, ಬೆಂಗಳೂರು-560 003.

" ಮರಗಳು ನಿಮ್ಮ ಭವಿಷ್ಯ ನಿಧಿ "

ಕರ್ನಾಟಕ ವಾರ್ತೆ

F/NP/KRNU/72 No. M (2) PRB 210/73/74

Shoodra Kannada Monthly



ಅಕ್ಟೋಬರ್ ಸಂಚಿಕೆಯಲ್ಲಿ :

ಓ. ಎಲ್. ನಾಗಭೂಷಣಸ್ವಾಮಿ — ಎಸ್. ಎಸ್. ಹಿರೇಮಠ್ ಎ. ಆರ್. ನಾಗಭೂಷಣ — ಪಿ. ಆರ್. ತಿಪ್ಪೆಸ್ವಾಮಿ — ಬಾ. ಹ. ರಮಾ ಕುಮಾರಿ — ಚಿಕ್ಕವೀರಯ್ಯ — ಚೆನ್ನಣ್ಣ ವಾಲಿಕಾರ — ರಾಜಶೇಖರ ಹನುಮಾಲಿ — ಎಲ್ಸಿ ನಾಗರಾಜ — ಶಿವರಾಂ ಪೈಲೂರು — ಕನಸಿಗೊಂದು ಕಣ್ಣು — ರಾಮಚಂದ್ರದೇವ — ಸುದ್ದಿಯ ಗುದ್ದಾಟ.

Printed at : Shalivahan Printers, Bangalore-53
Editor & Publisher : M. SRINIVAS